# ಮರವಿಲ್ಲದ ಚೈತನ್ಯ

ಮೂಲ: ಪುಂಡಲೀಕ ನಾರಾಯಣ ನಾಯಕ
ಅನುವಾದ: ಶಾ. ಮಂ. ಕೃಷ್ಣರಾಯ



# ಮತವಿಲ್ಲದ ಚೈತನ್ಯ
ಮತ್ತು
# ಶ್ರೀ ವಿಚಿತ್ರದ ಜಾತ್ರೆ

**(ಕೊಂಕಣಿ ಪ್ರಾಯೋಗಿಕ ನಾಟಕಗಳ ಕನ್ನಡಾನುವಾದ)**

ಮೂಲ ಕೊಂಕಣಿ :
ಪುಂಡಲೀಕ ನಾರಾಯಣ ನಾಯಕ
ಅನುವಾದ :
ಶಾ. ಮಂ. ಕೃಷ್ಣರಾಯ

ಸಾಗರ್ ಪ್ರಕಾಶನ
ನಂ.೬೯೫, ೧೦ನೇ ಮುಖ್ಯ ರಸ್ತೆ, ೮೦ ಅಡಿರಸ್ತೆ,
ವಿನಾಯಕ ಬಡಾವಣೆ, ನಾಗರಬಾವಿ ೨ನೇ ಸ್ಟೇಜ್, ಬೆಂಗಳೂರು-೫೬೦ ೦೭೨
ಫೋನ್ : ೯೪೪೮೪೯೪೬೩೨
e-mail : sagarprakashana@gmail.com

**MATHAVILLADA CHAITANYA AND SRI VICHITRADA JAATRE** - Plays written by Pundaleek Narayana Naik Goa and Translated by S.M. Krishna Rao, 500, 'SAHITYA SADAN' 11th Cross, 10th Main, Girinagar, Bangalore - 85, Ph-26422331, Published by **Sagar Prakashana**, No.695, 10th Main, 50Feet Road, Vinayaka Layout, Nagarabhavi 2nd Stage, Bangalore : 560 072
Ph: 94484 94632 e-mail : sagarprakashana@gmail.com

Used Paper : N.S. Maplitho 70gsm
Book Size : Demy 1/8



ಮೊದಲನೆಯ ಮುದ್ರಣ : ೨೦೦೯

ಪುಟಗಳು : ೧೨೦

ಬೆಲೆ : ರೂ. ೬೫-೦೦

ಮುಖಪುಟ : ಮೋನಪ್ಪ



ಮುದ್ರಣ :
**ಪೂರ್ಣಿಮಾ ಪ್ರಿಂಟರ್ಸ್**
ನಂ.೧/೨, ೭ನೇ ಅಡ್ಡರಸ್ತೆ,
ಆಜಾದ್‌ನಗರ, ಚಾಮರಾಜಪೇಟೆ,
ಬೆಂಗಳೂರು-೧೮
ಫೋನ್ : 9341931668

# ಮುನ್ನುಡಿ

ಕೊಂಕಣಿ ಭಾಷೆಗೆ ತನ್ನದೇ ಆದ ಇತಿಹಾಸವಿದೆ. ಅದು ಬಹುಕಾಲ ಜನರ ಹೃದಯದಲ್ಲಿ ತಳವೂರಿದ, ಅರಳಿದ ಭಾಷೆ. ಅದನ್ನು ಅಲ್ಲಗಳೆಯುವ, ಅಸ್ತಿತ್ವ ಪ್ರಶ್ನಿಸುವ ಹಲವಾರು ಪ್ರಯತ್ನಗಳಾದರೂ ಜಪ್ಪೆನ್ನದೆ ಜನರ ನಾಲಗೆಯಲ್ಲಿ ಬದುಕಿ ಬಂದ ಭಾಷೆ. ಅದು ಸ್ವತಂತ್ರ ಭಾಷೆಯೇ ಅಲ್ಲ, ಅದು ಮರಾಠಿಯ ಆಡುಭಾಷೆ ಎಂದು ಹುಯಿಲೆಬ್ಬಿಸಿ ಭಾಷೆಯನ್ನು ತುಳಿಯಲೆತ್ನಿಸಿದರೂ ಅದು ತನ್ನ ಸತ್ವದಿಂದ, ಅದು ಭಾರತೀಯ ಪ್ರಸಿದ್ಧ ಭಾಷಾತಜ್ಞ ಡಾ. ಸುನೀತಿಕುಮಾರ ಚಟರ್ಜಿಯವರಿಂದಲೇ ಸ್ವತಂತ್ರ ಭಾಷೆಯೆಂಬ ಸರ್ಟಿಫಿಕೇಟ್ ಪಡೆಯಬೇಕಾಯಿತು.

ಕೊಂಕಣಿ ಭಾಷೆಯ ಮೂಲಸ್ಥಾನ ಗೋಮಂತಕ. ಅಲ್ಲಿಂದ ವಲಸೆಹೋದ ಕೊಂಕಣಿ ಭಾಷಿಕರು-ಕರ್ನಾಟಕ, ಕೇರಳ, ಮಹಾರಾಷ್ಟ್ರದಲ್ಲಿ ಪಸರಿಸಿದರು. ಚೋದ್ಯವೆಂದರೆ ಮಹಾರಾಷ್ಟ್ರಕ್ಕೆ ಹೋದ ಕೊಂಕಣಿ ವಲಸಿಗರು ಕೊಂಕಣಿ ಭಾಷೆಯನ್ನು ಸಂಪೂರ್ಣವಾಗಿ ತ್ಯಜಿಸಿ ಮರಾಠಿಗರಾದರು. ಆದರೆ ಕರ್ನಾಟಕ ಮತ್ತು ಕೇರಳಕ್ಕೆ ಹೋದ ಕೊಂಕಣಿಗರು ತಮ್ಮ ಭಾಷೆ ಕೊಂಕಣಿಯನ್ನು ಉಳಿಸಿಕೊಂಡು ಪ್ರಾದೇಶಿಕ ಭಾಷೆಯನ್ನು ಆತ್ಮಸಾತ್ ಮಾಡಿಕೊಂಡು ಆ ಭಾಷೆಗಳಲ್ಲಿ ಸಾಹಿತ್ಯ ರಚಿಸಿ ಹೆಸರು ಮಾಡಿದರು. ಕರ್ನಾಟಕದಲ್ಲಿ ಕೊಂಕಣಿ ಭಾಷಿಕರಾದ ರಾಷ್ಟ್ರಕವಿ ಎಂ. ಗೋವಿಂದ ಪೈ, ಪಂಜೆ ಮಂಗೇಶರಾಯರು, ದಿನಕರ ದೇಸಾಯಿ, ಗೌರೀಶ ಕಾಯ್ಕಿಣಿ, ಯಶವಂತ ಚಿತ್ತಾಲ, ಗಂಗಾಧರ ಚಿತ್ತಾಲ, ಸುಂದರ ನಾಡಕರ್ಣಿ, ಅರವಿಂದ ನಾಡಕರ್ಣಿ, ಕೃಷ್ಣಾನಂದ ಕಾಮತ, ಗಿರೀಶ ಕರ್ನಾಡ ಮೊದಲಾದವರು ಕನ್ನಡದ ಸೇವೆ ಮಾಡಿದರು. ಕೇರಳದಲ್ಲೂ ಕೊಂಕಣಿ ಭಾಷಿಕರು ಮಲೆಯಾಳಂ ಭಾಷೆಯಲ್ಲಿ ಬರೆದೂ ಹೆಸರು ಮಾಡಿದ್ದಾರೆ.

ಒಂದು ಕಾಲದಲ್ಲಿ ಪೋರ್ಚುಗೀಸರು ಬ್ರಾಹ್ಮಣೀ ಭಾಷೆಯೆಂದು ಕೊಂಕಣಿಯನ್ನು ಕರೆದಿದ್ದರೂ ಅದು ಹಿಂದು, ಮುಸ್ಲಿಮ, ಕ್ರೈಸ್ತ ಧರ್ಮದ ಇಪ್ಪತ್ತೆರಡು ಉಪಸಂಸ್ಕೃತಿಯವರು ಮಾತನಾಡುವ ಭಾಷೆ. ಆದ್ದರಿಂದ ಕೊಂಕಣಿ ಭಾಷೆಯನ್ನು ಧರ್ಮಾತೀತ, ಜಾತ್ಯತೀತ ಭಾಷೆಯೆನ್ನಬಹುದು.

ಕೊಂಕಣಿ ಭಾಷೆ ಪರಕೀಯರ, ಸ್ವಕೀಯರ ಅವಹೇಳನೆಗೆ, ತುಳಿತಕ್ಕೆ ಒಳಗಾದರೂ ಅದು ಸಾಯಲಿಲ್ಲ. ಅದು ಜನರ ಹೃದಯ ಸಿಂಹಾಸನದಲ್ಲಿ ಪ್ರತಿಷ್ಠಿತವಾಗಿತ್ತು. ಜನಪದದ ನಾಲಗೆಯಲ್ಲಿ ನರ್ತಿಸುತ್ತಿತ್ತು. ಗೋಮಂತಕೀಯರು ಕಾರಣಾಂತರಗಳಿಂದ ಗೋವೆಯ ದಕ್ಷಿಣಕ್ಕೂ, ಉತ್ತರಕ್ಕೂ ವಲಸೆ ಹೋದರು.

ಕೊಂಕಣಿ ಭಾಷೆಯಲ್ಲಿ ಇಬ್ಬರು ಆಚಾರ್ಯ ಪುರುಷರಾಗಿ ಹೋಗಿದ್ದಾರೆ. ಕೊಂಕಣಿ ಮರಾಠಿಯ ಆಡುಭಾಷೆಯಲ್ಲ ಅದೊಂದು ಸ್ವತಂತ್ರ ಭಾಷೆ ಎಂದು ಸಿದ್ಧ ಮಾಡಲು ಅಪಾರ ತ್ಯಾಗ ಮಾಡಿ ಸಂಶೋಧನೆ ಮಾಡಿ ಅನೇಕ ಪುಸ್ತಕಗಳನ್ನು ಬರೆದು ಕೊಂಕಣಿ ಭಾಷೆಯ ಗೌರವ ಹೆಚ್ಚಿಸಿದ ವಾಮನ ವರ್ದೆ ವಾಲಾವಲೀಕರ್ ಉರ್ಫ ಶಣೈ ಗೋಂಯಬಾಬ ಒಬ್ಬರಾದರೆ ಮತ್ತೊಬ್ಬರು ಕನ್ಯಾಕುಮಾರಿಯಿಂದ ಮುಂಬಯಿಯವರೆಗೆ ಕೊಂಕಣಿ ಭಾಷಿಕರನ್ನು ಹುಡುಕುತ್ತ ಹೋಗಿ ಅವರಲ್ಲಿ ಸ್ವಭಾಷಾ ಪ್ರೇಮ, ಸ್ವಾಭಿಮಾನ ಜಾಗೃತಗೊಳಿಸಿದ ಮಾಧವ ಮಂಜುನಾಥ ಶಾನಭಾಗರು. ಇವರು ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಓದಿ ಕಾರವಾರದಲ್ಲಿ ವಕೀಲಿ ಮಾಡುತ್ತ ಕೊಂಕಣಿ ಭಾಷಿಕರನ್ನು ಒಗ್ಗೂಡಿಸುವ ಪ್ರಯತ್ನ ಮಾಡುತ್ತ ೧೯೩೯ರಲ್ಲಿ ಕಾರವಾರದಲ್ಲಿ ಪ್ರಪ್ರಥಮ 'ಕೊಂಕಣಿ ಸಮ್ಮೇಳನ ನಡೆಸಿಕೊಟ್ಟರು.

ಕೊಂಕಣಿ ಭಾಷೆಗೆ ಸಾಹಿತ್ಯಕ ರೂಪ ಕೊಡುವ ಕಾರ್ಯ ಮಂಗಳೂರಿನಲ್ಲಿ, ಗೋವೆಯಲ್ಲಿ, ಉತ್ತರ ಕನ್ನಡದಲ್ಲಿ ಭರದಿಂದ ನಡೆದಿತ್ತು. ಸೃಜನಾತ್ಮಕ, ಸೃಜನೇತರ ಸಾಹಿತ್ಯ ನಿರ್ಮಾಣವಾಗುತ್ತಿತ್ತು. ಕೊಂಕಣಿ ಪತ್ರಿಕೆಗಳು ಪ್ರಕಟವಾಗುತ್ತಿದ್ದವು. ಇಂಥ ಸನ್ನಿವೇಶದಲ್ಲಿ ಗೋವೆಯು ೧೯೬೧ರಲ್ಲಿ ಸ್ವತಂತ್ರವಾಯಿತು. ಇದರಿಂದ ಕೊಂಕಣಿ ಭಾಷೆಯು ಮೂಲಪೀಠವಾದ ಗೋವೆಯಲ್ಲಿ ಕೊಂಕಣಿ ಭಾಷೆ ಬೆಳೆಯುವ ವಾತಾವರಣ ನಿರ್ಮಾಣವಾಯಿತು. ಗೋವೆ ಮಹಾರಾಷ್ಟ್ರದಲ್ಲಿ ವಿಲೀನವಾಗುವುದನ್ನು ತಡೆಯಲು, ಗೋವೆಯ ಭಾಷೆ ಕೊಂಕಣಿ ಎಂದು ಸಾಬೀತು ಮಾಡಲು ಅನೇಕ ಹೋರಾಟ ಮಾಡಬೇಕಾಯಿತು. ಆ ಹೋರಾಟಗಳಲ್ಲಿ ಹಿರಿಯರಾದ ರವೀಂದ್ರ ಕೆಳೇಕರ್, ಶಂಕರ ಭಾಂಡಾರಿ, ಡಾ.ಮನೋಹರರಾವ್ ಸರ್‌ದೇಸಾಯಿ, ಲಕ್ಷ್ಮಣರಾವ್ ಸರ್‌ದೇಸಾಯಿ, ಉದಯ ಭೇಂಬ್ರೆ, ಚಂದ್ರಕಾಂತ ಕೇಣಿ ಅವರೊಂದಿಗೆ ಪುಂಡಲೀಕ ನಾರಾಯಣ ನಾಯಕ ಇದನ್ನೆಲ್ಲ ನೋಡಿ ಬೆಳೆಯುತ್ತಿದ್ದ ತರುಣ.

ಪುಂಡಲೀಕ ನಾರಾಯಣ ನಾಯಕ ಕೊಂಕಣಿ ಭಾಷೆಯ ಹೆಸರಾಂತ ಲೇಖಕರಲ್ಲಿ ಒಬ್ಬರು. ಇವರ ಗೋವೆಯ ಗ್ರಾಮಾಂತರ ಪ್ರದೇಶ ವಳವಯಿ (Volvoi)ಯಲ್ಲಿ ೨೧ ಏಪ್ರಿಲ್ ೧೯೫೨ರಲಿ ಹುಟ್ಟಿದರು. ೧೯೭೨ರಿಂದ ಆರುವರ್ಷ ಶಿಕ್ಷಕರಾಗಿ, ಅನಂತರ (೧೯೭೮) ಆಕಾಶವಾಣಿ ಕೇಂದ್ರದಲ್ಲಿ ಉಪಸಂಪಾದಕರಾಗಿ, ಕೆಲಕಾಲದನಂತರ ಸಹಸಂಪಾದಕರಾಗಿ ಕಾರ್ಯನಿರ್ವಹಿಸುತ್ತ ಕೆಲಸಕ್ಕೆ ೧೯೮೮ರಲ್ಲಿ ರಾಜೀನಾಮೆ ನೀಡಿ ಸಂಪೂರ್ಣವಾಗಿ ಕೊಂಕಣಿ ಭಾಷೆಯ ಸೇವೆಗೆ ತನ್ನನ್ನು ತಾನು ಒಪ್ಪಿಸಿಕೊಂಡರು.

ಅಷ್ಟೊತ್ತಿಗಾಗಲೇ ಅವರು ಅನೇಕ ಬಾನುಲಿ ನಾಟಕಗಳನ್ನು ಬರೆದು, ಇತರ ನಾಟಕಗಳನ್ನು ಬರೆದು, ನಿರ್ದೇಶಿಸಿ, ಭಾಷಣ, ಲೇಖನಗಳಿಂದ ಹೆಸರು ಮಾಡಿದ್ದರು. ಇವರು ಎಷ್ಟು ಚೆನ್ನಾಗಿ ಬರೆಯಬಲ್ಲರೋ ಅದಕ್ಕಿಂತ ಚೆನ್ನಾಗಿ ಭಾಷಣ ಮಾಡಬಲ್ಲರು. ಗೋವೆ ಮಹಾರಾಷ್ಟ್ರದಲ್ಲಿ ವಿಲೀನವಾಗುವುದನ್ನು ವಿರೋಧಿಸಿದ ಗೋಮಂತಕೀಯರು ಅನಂತರ ತಮ್ಮ ಭಾಷೆ ಉಳಿಸಿಕೊಳ್ಳಲು ಹೋರಾಟ ಮಾಡಬೇಕಾದ ಪ್ರಸಂಗ ಬಂತು. ಆಗ 'ಕೊಂಕಣಿ ಪ್ರಜೆಚೊ ಆವಾಜ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಗೋವೆಯ ಮೂಲೆಮೂಲೆಗೂ ಹೋಗಿ ತಮ್ಮ ಅಮೋಘವಾದ ವಾಗ್‌ವೈಖರಿಯಿಂದ ಕೊಂಕಣಿ ಭಾಷೆ ಉಳಿಯಬೇಕು, ಅದಕ್ಕೆ ಗೋವೆಯ ರಾಜ್ಯಭಾಷೆಯ ಸ್ಥಾನಮಾನ ಸಿಗಬೇಕು. ಅಲ್ಲದೆ ಭಾರತೀಯ ಭಾಷೆಗಳಲ್ಲಿ (೮ನೆಯ ಪರಿಶಿಷ್ಟ) ಅದಕ್ಕೂ ಗೌರವದ ಸ್ಥಾನಮಾನ ಸಿಗಬೇಕೆಂದು ಬೃಹತ್ ಹೋರಾಟ ಮಾಡಿದರು. ಅದರ ಸೂತ್ರಧಾರರಾಗಿ, ತಮ್ಮ ಗೆಳೆಯರನ್ನು ಸೇರಿಸಿಕೊಂಡು ಹೋರಾಟಕ್ಕಿಳಿದವರು ಶ್ರೀ ಪುಂಡಲೀಕ ನಾರಾಯಣ ನಾಯಕ ಅವರು. ಅವರೊಂದಿಗೆ ಸಾವಿರಾರು ಹಿರಿಯರು, ಯುವಕರು ಉತ್ಸಾಹದಿಂದ ದುಡಿದರು. ಆ ಕಾರ್ಯದಲ್ಲಿ ಅವರು ಯಶಸ್ವಿಯಾದರು. ಅನಂತರ (೧೯೫೫)ರಲ್ಲಿ ನೈಲಾನ್ ೬.೬. ಕಾರ್ಖಾನೆ ಸ್ಥಾಪಿಸಲು ಸ್ಥಳೀಯ ಸರಕಾರದ ಕುಮ್ಮಕ್ಕಿನಲ್ಲಿ ಮುಂದಾದಾಗ ಗೆಳೆಯರನ್ನು ಸೇರಿಸಿಕೊಂಡು ಕಲ್ಕತ್ತೆಯಲ್ಲಿ ಮಮತಾ ಬ್ಯಾನರ್ಜಿ ಮಾಡಿದಂತೆ ಪರಿಸರ ರಕ್ಷಣೆಗಾಗಿ ಸುದೀರ್ಘ ಹೋರಾಟ ಮಾಡಿದರು. ಅಲ್ಲಿಯೂ ಅವರು ಯಶಸ್ವಿಯಾದರು. ನೈಲಾನ್ ಕಂಪನಿ ಅಲ್ಲಿಂದ ಕಾಲು ಕೀಳಬೇಕಾಯಿತು.

ಹೀಗೆ ಕೊಂಕಣಿ ಭಾಷೆ ಮತ್ತು ಪರಿಸರದ ಅಸ್ತಿತ್ವ ಉಳಿಸಿಕೊಳ್ಳಲು ಹೋರಾಡಿದ ಪುಂಡಲೀಕ ನಾರಾಯಣ ನಾಯಕರು ಮೂಲತಃ ಒಬ್ಬ ರಂಗಕರ್ಮಿ. ತಾವು ನಾಟಕ ಬರೆಯುತ್ತಾರೆ, ನಿರ್ದೇಶಿಸುತ್ತಾರೆ, ಪಾತ್ರ ವಹಿಸುತ್ತಾರೆ. ಒಂದು ಕಾಲದಲ್ಲಿ ಗೋವೆಯಲ್ಲಿ ಸ್ವತಂತ್ರ ಕೊಂಕಣಿ ನಾಟಕಗಳಿರಲಿಲ್ಲ. ಪೋರ್ಚುಗೀಸ, ಫ್ರೆಂಚ,

ಮರಾಠಿಯಿಂದ ಅನುವಾದಗೊಂಡ ನಾಟಕಗಳಿದ್ದವು. ಶಾಲೆ ಕಾಲೇಜ ಹುಡುಗರು, ಜಾತ್ರೆ, ಹಬ್ಬಗಳಲ್ಲಿ ಜನರು ಅನಿವಾರ್ಯವಾಗಿ ಮರಾಠಿ ನಾಟಕ ಪ್ರದರ್ಶಿಸಬೇಕಾಗಿತ್ತು. ಪುಂಡಲೀಕ ನಾಯಕರು ಈ ಕೊರತೆಯನ್ನು ನೀಗಿಸಲು ಅನೇಕ ಕೊಂಕಣಿ ನಾಟಕಗಳನ್ನು ಬರೆದರು. 'ಖಣ ಖಣ ಮಾತಿ', 'ರಕ್ತಖೇವ', 'ರಾಖಣ', 'ಸುರೀಂಗ', 'ಸೂರ್ಯಸಾಂವಟ', 'ದೆಮಾಂದ', ಮುಕ್ತತಾಯ', ಶಬೈಶಬೈ ಭೌಜನ ಸಮಾಜ', 'ಪಿಂಪಳ ಪೆಟ್‌ಲಾ, 'ಶ್ರೀ ವಿಚಿತ್ರಾಚಿ ಜಾತ್ರಾ', 'ಆತ್ಮವಂಚನಾ', 'ಚೈತನ್ಯಾಕ ಮಠ ನಾ' ಮೊದಲಾದ ನಾಟಕಗಳನ್ನಲ್ಲದೆ 'ಗಾಂವಧನಿ ಗಾಂವಕಾರ', 'ಚೌರಂಗ', 'ಆಕಾಶ ಮಂಚ' ಎಂಬ ಏಕಾಂಕ ನಾಟಕಗಳನ್ನು ಪ್ರಕಟಿಸಿದರು. ಇದರಲ್ಲಿ ಬಾನುಲಿ ನಾಟಕಗಳೂ ಸೇರಿವೆ. 'ರಾನಸುಂದರಿ', 'ಆಳಶಾಂಕ ವಾಗ ಖಾತಲೊ' ಎಂಬ ಮಕ್ಕಳ ನಾಟಕಗಳನ್ನು ಏಕಪಾತ್ರಾಭಿನಯದ 'ಛಪ್ಪನ್ನ ಥಿಗಳಿ ಯಸವಂತ' ನಾಟಕವನ್ನೂ ಬರೆದಿದ್ದಾರೆ. ಅಲ್ಲದೆ ದೂರದರ್ಶನ ಮತ್ತು ರೇಡಿಯೋ ನಾಟಕಗಳನ್ನೂ ಬರೆದಿದ್ದಾರೆ. ಇದಲ್ಲದೆ ಸುಮಾರು ೧೦ ದೂರದರ್ಶನದ ನಾಟಕಗಳಿಗೆ ಸಂಭಾಷಣೆ ಮತ್ತು ಹಾಡುಗಳನ್ನೂ, ಕೆಲವು ಕೊಂಕಣಿ ಟೆಲಿಫಿಲ್ಮ್ ಮತ್ತು ಚಲಚಿತ್ರಗಳಿಗೂ ಸಂಭಾಷಣೆ ಬರೆದಿದ್ದಾರೆ. ಇವರು ಒಬ್ಬ ನುರಿತ ನಟರೂ, ದಿಗ್ದರ್ಶಕರೂ ಆಗಿರುವುದರಿಂದ ಇವರ ದೃಶ್ಯ ಸಾಹಿತ್ಯ ಗೋವೆಯ ಜನಜೀವನ, ಸಂಸ್ಕೃತಿ ಅನಾವರಣಗೊಳಿಸುತ್ತ ಹೊಸತನದ ಆಲಾಪದೊಂದಿಗೆ ಕಂಗೊಳಿಸುತ್ತವೆ. ಇವರು ಅಪ್ಪ ನೆಟ್ಟ ಆಲದ ಮರಕ್ಕೆ ನೇಣು ಬಿಗಿದುಕೊಳ್ಳುವವರಲ್ಲ. ಅವರ ನಾಟಕಗಳಲ್ಲಿ ಹೊಸ ದೃಷ್ಟಿಯಿದೆ, ಹೊಸ ಧ್ವನಿಯಿದೆ, ಹೊಸ ಸಂಯೋಜನೆಯಿದೆ, ಸಂಭಾಷಣೆಯಲ್ಲಿ ಹೊಸ ಹುರುಪು ಇದೆ. ಆದ್ದರಿಂದಲೇ ಗೋವೆಯ ಮೂಲೆ ಮೂಲೆಗಳಲ್ಲಿ ಇವರ ನಾಟಕಗಳು ಪ್ರದರ್ಶಿಸಲ್ಪಡುತ್ತವೆ.

ಇಲ್ಲಿ ಅನುವಾದಿಸಿದ 'ಶ್ರೀ ವಿಚಿತ್ರದ ಜಾತ್ರೆ' ಮತ್ತು 'ಮಠವಿಲ್ಲದ ಚೈತನ್ಯ' ಪ್ರಾಯೋಗಿಕ ಅಂಶವನೊಳಗೊಂಡ ನಾಟಕಗಳು. 'ಮಠವಿಲ್ಲದ ಚೈತನ್ಯ' ೧೮ ಮಾರ್ಚ ೧೯೯೧ರಂದು, ಶ್ರೀ ವಿಚಿತ್ರದ ಜಾತ್ರೆ ೧೭ ಜನವರಿ ೧೯೮೭ರಂದು ರಂಗಭೂಮಿಗೆ ಬಂದವು.

"ಶ್ರೀ ವಿಚಿತ್ರದ ಜಾತ್ರೆ" ತಮಿಳು ಭಾಷೆಯ ಒಬ್ಬ ಪ್ರಸಿದ್ಧ ಲೇಖಕ ಮತ್ತು ಕವಿ ಸೆವುಗನ್ ಅಣ್ಣಾಮಲೈ ಕಾಲೇಜ್ ದೇವಕೊಟ್ಟಾಯ ತಮಿಳು ವಿಭಾಗದ ಪ್ರಮುಖರಾದ ಡಾ. ಸಿಂಗಾರಾವಾದಿ ವೇಲನ್ ಇವರು ಅನುವಾದಿಸಿ 'ತಿಸಾ ಇಮಾರಿ ನಾಟಕಂ ದೈವಾ ಚಂಥಯಿ' ಎಂಬ ಹೆಸರಿನಿಂದ ವೆಟ್ರಿವೆಲ್ ಅರಾಕೊಂಡಾಯಿ ಪಥಿಪಾಹಮ್ ಪ್ರಕಾಶನ

ಸಂಸ್ಥೆ ಬಿಡುಗಡೆ ಮಾಡಿದೆ. 'ಶ್ರೀ ವಿಚಿತ್ರದ ಜಾತ್ರೆ' ನಾಟಕಕ್ಕೆ ಅಖಿಲಭಾರತ ಆಕಾಶವಾಣಿ ನಾಟಕ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಬಂತು. ಅನಂತರ ಆಸ್ಟ್ರೇಲಿಯನ್ ಅಕಾಡೆಮಿ ಆಫ್ ಬ್ರಾಡಕಾಸ್ಟ ಆರ್ಟ್ಸ್ ಅಂಡ ಸೈನ್ಸ್ ಇವರ ಪ್ರತಿಷ್ಠೆಯ ಪ್ಯಾಟರ್ಸ್ ಅವಾರ್ಡ ಈ ನಾಟಕಕ್ಕೆ ಪ್ರಾಪ್ತವಾಯಿತು (೧೯೮೬). ಕೇಂದ್ರ ಸಾಹಿತ್ಯ ಅಕಾಡೆಮಿಯವರು ಇಂಗ್ಲಿಷಿನಲ್ಲಿ ಪ್ರಕಟಿಸುತ್ತಿರುವ ದ್ವೈಮಾಸಿಕ 'ಇಂಡಿಯನ್ ಲಿಟರೇಚರ್' ಪತ್ರಿಕೆಯಲ್ಲಿ ಇದೇ ನಾಟಕ The Fair of the unfair ಎಂಬ ಹೆಸರಿನಿಂದ ಪ್ರಕಟವಾಗಿದೆ. ಇದಲ್ಲದೆ ಈ ನಾಟಕ ಮರಾಠಿಯಲ್ಲೂ ಅನುವಾದಗೊಂಡಿದೆ.

ಇವರ 'ರಾನಸುಂದರಿ' ಎಂಬ ಮಕ್ಕಳ ಗೀತ ನಾಟಕಕ್ಕೆ ಗೋವಾ ಕಲಾ ಅಕಾಡಮಿ ಪುರಸ್ಕಾರ (೧೯೭೫), 'ಮರ್ಣಕಟೊ' ಎಂಬ ಏಕಾಂಕ ನಾಟಕಕ್ಕೆ ಆಕಾಶವಾಣಿಯ ಅಖಿಲ ಭಾರತ ಸ್ಪರ್ಧೆಯಲ್ಲಿ ಬಹುಮಾನ (೧೯೮೦). ಆಕಾಶವಾಣಿಯ ಅಖಿಲಭಾರತ ನಾಟಕ ಸ್ಪರ್ಧೆಯಲ್ಲಿ "ಮಹಾಸಾಗರಾಂತ್ಲೆ ತಾರುಂ" ಪ್ರಥಮ ಬಹುಮಾನ ಲಭ್ಯವಾಗಿದೆ. ಇವರ ಏಕಾಂಕ ನಾಟಕ ಸಂಗ್ರಹಕ್ಕೆ 'ಚೌರಂಗ'ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಲಭಿಸಿದೆ.

ಹೀಗೆ ಪುಂಡಲೀಕ ನಾರಾಯಣ ನಾಯಕ ಅವರು ಪ್ರಮುಖವಾಗಿ ನಾಟಕಕಾರರೆಂದೇ ಮಿಂಚಿದರೂ ಇವರ ಇತರ ಸಾಹಿತ್ಯ ಕಡೆಗಣಿಸುವಂತಿಲ್ಲ. ಇವರ ಏಕೈಕ ಕವನ ಸಂಕಲನ 'ಗಾ ಆಮಿ ರಾಖಣೆ' ವಿಮರ್ಶಕರ ಮೆಚ್ಚುಗೆಯನ್ನು ಪಡೆದಿದೆ. ಇವರು ಕೆಲವೇ ಕಥೆಗಳನ್ನು ಬರೆದರೂ ಅವು 'ಮುಠಯ್', 'ಅರ್ದುಕ', 'ಪಿಶಾಂತರ' ಕಥಾ ಸಂಕಲನಗಳಲ್ಲಿ ಹಂಚಿ ಹೋಗಿವೆ. ಅವರ ಕಥೆಗಳು ಅವರಿಗೆ ಕೊಂಕಣಿ ಕಥಾಪ್ರಪಂಚದಲ್ಲಿ ಮಹತ್ವದ ಸ್ಥಾನವನ್ನು ಕಲ್ಪಿಸಿವೆ. ಅವರ ಅನೇಕ ಕಥೆಗಳು ಮರಾಠಿ, ಗುಜರಾತಿ, ಇಂಗ್ಲಿಷ, ಕನ್ನಡ ಭಾಷೆಗೆ ತರ್ಜುಮೆಯಾಗಿವೆ.

ಕಾದಂಬರಿ ಕ್ಷೇತ್ರದಲ್ಲೂ ಇವರು ಹಿಂದೆ ಬಿದ್ದಿಲ್ಲ. ಇವರ ಏಕೈಕ ಕಾದಂಬರಿ 'ಅಚ್ಛೇವ' ಕಾದಂಬರಿ ಗೋವೆಯ ಗಣಿ ಜೀವನವನ್ನು ತೆರೆದು ತೋರುವಂಥದ್ದು. ಇದೂ ವಿಮರ್ಶಕರ ಮೆಚ್ಚುಗೆಯನ್ನು ಓದುಗರ ಪ್ರೀತಿಯನ್ನು ಸಂಪಾದಿಸಿದೆ. ಈ ಕಾದಂಬರಿ ಇಂಗ್ಲಿಷಿಗೆ ಅನುವಾದಗೊಂಡಿದ್ದು ಆಕ್ಸಫರ್ಡ ಯುನಿವರ್ಸಿಟಿ ಪ್ರೆಸ್ ಪ್ರಕಟಿಸಿದೆ. (೨೦೦೨) ಇವರ ಇನ್ನೊಂದು ನೀಳ್ಗತೆ 'ಗುಣಾಜಿ' ಗುಜರಾತಿ ಭಾಷೆಗೆ ಅನುವಾದಗೊಂಡಿದೆ.

ಕೊಂಕಣಿಯ ತರುಣ ಬರೆಹಗಾರನೊಬ್ಬ ಎರಡು ಮೂರು ದಶಕಗಳಲ್ಲಿ ತನ್ನ

ಸಾಹಿತ್ಯಕ ಚಟುವಟಿಕೆಯಿಂದ ಇಂಗ್ಲಿಷ, ಹಿಂದಿ, ಮರಾಠಿ, ತಮಿಳು, ಕನ್ನಡ, ಗುಜರಾತಿ ಓದುಗರಿಗೆ ಪರಿಚಿತನಾಗುವುದು ಸಾಮಾನ್ಯ ಸಾಧನೆಯಲ್ಲ.

ಇವರು ಬರೆದು ನಿರ್ದೇಶಿಸಿದ 'ದೇಖಣಿ ದುರಾಯಿ' ಎಂಬ ಚಲಚಿತ್ರಕ್ಕೆ ೧೯೯೭ರಲ್ಲಿ ನಡೆದ ಫಿಲ್ಮಫೆಸ್ಟಿವಲ್‌ನಲ್ಲಿ ಸ್ಕ್ರೀನ್ ಪ್ಲೇ ಬರೆದುದಕ್ಕೆ ಪ್ರಥಮ ಬಹುಮಾನ, ಅಲ್ಲದೆ ಚಲಚಿತ್ರಕ್ಕೂ 'ಅತ್ಯುತ್ತಮ ಚಲಚಿತ್ರ' ಪುರಸ್ಕಾರವೂ ಲಭಿಸಿದೆ.

ಗೋವಾ ಸರಕಾರದ ಆರ್ಟ ಅಂಡ ಕಲ್ಚರ್ ಇಲಾಖೆಯ ರಾಷ್ಟ್ರಮಟ್ಟದಲ್ಲಿ ತಮ್ಮ ಕೊಡುಗೆಯಿಂದ ಸಾಧನೆ ಮಾಡಿದ ವ್ಯಕ್ತಿಗೆ ಕೊಡುವ ಅತ್ಯುನ್ನತ ಪುರಸ್ಕಾರ ಇವರಿಗೆ ಬಂದಿದೆ (೨೦೦೭).

ಇವರು ಅನೇಕ ರಾಜ್ಯಸ್ತರೀಯ, ರಾಷ್ಟ್ರಮಟ್ಟದ ಸಭೆ, ಸಮಾರಂಭ, ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿದ್ದಾರೆ. ಇವರು ಗೋವಾರಾಜ್ಯ ಆಡಳಿತ ಭಾಷಾ ವಿಭಾಗದಲ್ಲಿ ಸಲಹೆಗಾರರಾಗಿ (೧೯೯೧), ಗೋವಾ ಕೊಂಕಣಿ ಅಕಾಡೆಮಿಯ ಉಪಾಧ್ಯಕ್ಷರಾಗಿ (೧೯೯೩-೯೬), ವೆಸ್ಟ ಝೋನ ಕಲ್ಚರಲ್ ಸೆಂಟರ್, ಉದಯಪುರ ಸಂಸ್ಥೆಯ ಸದಸ್ಯರಾಗಿ (೧೯೯೨-೯೭), ಸಂಗೀತ ನಾಟಕ ಅಕಾಡಮಿ-ಹೊಸದಿಲ್ಲಿ ೧೯೯೩ರಿಂದ ಐದು ವರ್ಷ, ಗೋವಾ ಕಲಾ ಅಕಾಡಮಿ ೧೯೯೩ರಿಂದ ಮೂರು ವರ್ಷ, ಗೋವಾ ಕೊಂಕಣಿ ಅಕಾಡಮಿಯ ಸದಸ್ಯರಾಗಿ ೧೯೯೬ರಿಂದ ಮೂರು ವರ್ಷ, ನ್ಯಾಷನಲ್ ಬುಕ್ ಟ್ರಸ್ಟ್‌ನ ೧೯೯೭ರಲ್ಲಿ ಸದಸ್ಯರಾಗಿ, ಪಣಜಿ ದೂರದರ್ಶನ ಕೇಂದ್ರದ ಸಲಹಾ ಸಮಿತಿಯ ಸದಸ್ಯರಾಗಿ, ಗೋವಾ ಕೊಂಕಣಿ ಅಕಾಡಮಿಯ ಅಧ್ಯಕ್ಷರಾಗಿ ೨೦೦೨ರಿಂದ ೨೦೦೮ರವರೆಗೆ ಎರಡು ಟರ್ಮ ಕೆಲಸ ಮಾಡಿದ್ದಾರೆ. ಈಗ ಇವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಕೊಂಕಣಿ ಭಾಷಾ ಸಲಹಾ ಸಮಿತಿಯ ಸಂಚಾಲಕರು. ಇವರು ಅಮೆರಿಕೆಯ ಪೆನಿಸಿಲ್ವೆನಿಯಾ ಆಮಂತ್ರಣದ ಮೇರೆಗೆ ೨೦೦೨ ಫೆಬ್ರುವರಿಯಿಂದ ಎಪ್ರಿಲ್‌ವರೆಗೆ ಮೂರು ತಿಂಗಳು ಸಾಂಸ್ಕೃತಿಕ ಅಧ್ಯಯನ ಮಾಡಿ ಬಂದಿದ್ದಾರೆ.

ಇಷ್ಟೆಲ್ಲ ವಿವರಗಳ ಹಿನ್ನೆಲೆಯಲ್ಲಿ ನಾನು ಪುಂಡಲೀಕ ನಾರಾಯಣ ನಾಯಕರನ್ನು ಕನ್ನಡಿಗರಿಗೆ ಪರಿಚಯಿಸುತ್ತಿದ್ದೇನೆ. ಇಂದು ಕೊಂಕಣಿ ಭಾಷೆ ಪ್ರಬುದ್ಧವಾಗಿ ಬೆಳೆದಿದೆ. ಕೊಂಕಣಿ ಸಾಹಿತ್ಯ ಸಂಖ್ಯಾತ್ಮಕ, ಗುಣಾತ್ಮಕ ಪ್ರಗತಿಯನ್ನು ಸಾಧಿಸಿದೆ. ಕೊಂಕಣಿ ಭಾಷೆಗೆ ಏಕೈಕ 'ಪದ್ಮಶ್ರೀ' ಪುರಸ್ಕಾರ ತಂದುಕೊಟ್ಟವರು ಪ್ರಸಿದ್ಧ ಕವಿಯೂ, ಗಾಂಧಿ ಅನುಯಾಯಿಯೂ ಆಗಿದ್ದ ರಘುನಾಥ ವಿಷ್ಣು ಪಂಡಿತ. ಕೊಂಕಣಿ ಭಾಷೆಗೆ ಜ್ಞಾನಪೀಠ

ಪುರಸ್ಕಾರ ತಂದುಕೊಟ್ಟವರು ಹಿರಿಯ ಸ್ವಾತಂತ್ರ್ಯಯೋಧ, ಗಾಂಧಿ ಅನುಯಾಯಿ ರವೀಂದ್ರ ಕೆಳೇಕಾರ್ ಅವರು (೨೦೦೯).

ಇಂದು ಕೊಂಕಣಿ ಭಾಷೆಯಲ್ಲಿ ಬರೆಯುವವರು ಬಹಳ ಜನ ಇದ್ದಾರೆ. ಮಂಗಳೂರಿನಲ್ಲಂತೂ ನೂರಾರು ಕೊಂಕಣಿ ಬರಹಗಾರರು ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದಾರೆ. ಕೇರಳದ ಮಿತ್ರರೂ ಕೊಂಕಣಿಯಲ್ಲಿ ಬರೆಯುತ್ತಿದ್ದಾರೆ. ದುರ್ದೈವದ ಮಾತೆಂದರೆ ಎಲ್ಲರೂ ಕೊಂಕಣಿಯಲ್ಲಿ ಬರೆಯುತ್ತಿದ್ದರೂ ಒಬ್ಬರಿಗೊಬ್ಬರು ಅಪರಿಚಿತರಂತೆ ಬದುಕುತ್ತಿದ್ದಾರೆ. ಅದಕ್ಕೆ ಕಾರಣ ಅವರವರು ಒಪ್ಪಿಕೊಂಡ ಲಿಪಿಗಳು. ಗೋಮಂತಕೀಯರು ದೇವನಾಗರಿ ಮತ್ತು ರೋಮನ್ ಲಿಪಿಯಲ್ಲಿ ಬರೆದರೆ, ಕರ್ನಾಟಕದವರು ಕನ್ನಡ ಲಿಪಿಯಲ್ಲಿ, ಕೇರಳದ ಕೊಂಕಣಿ ಬಾಂಧವರು ಮಲೆಯಾಳಂ ಮತ್ತು ದೇವನಾಗರಿ, ಮಹಾರಾಷ್ಟ್ರದಲ್ಲಿದ್ದ ಕೊಂಕಣಿ ಬಂಧುಗಳು ಕನ್ನಡ, ದೇವನಾಗರಿ, ರೋಮನ್ ಲಿಪಿಯಲ್ಲೂ ಬರೆಯುತ್ತಾರೆ. ಕನ್ನಡ ಲಿಪಿಯವರಿಗೆ ದೇವನಾಗರಿ ಲಿಪಿ ಅರ್ಥವಾಗುವುದಿಲ್ಲ. ಗೋಮಂತಕೀಯರಿಗೆ ಮಲೆಯಾಳಂ, ಕನ್ನಡ ಲಿಪಿ ತಿಳಿಯುವುದಿಲ್ಲ. ಇಂಥ ಸಂದಿಗ್ಧ ಕಾಲದಲ್ಲಿರುವ ಕೊಂಕಣಿ ಸಾಹಿತ್ಯ ಕನ್ನಡಿಗರಿಗಾದರೂ ತಲುಪಲಿ ಎಂಬ ದೃಷ್ಟಿಯಿಂದ ಈ ಅನುವಾದ ಕೃತಿಗಳನ್ನು ನಿಮ್ಮ ಮುಂದಿಟ್ಟಿದ್ದೇನೆ.

ನಾವು ಇಂಗ್ಲಿಷ ಸಾಹಿತ್ಯವನ್ನು ಹೆಚ್ಚು ಓದಿದ್ದೇವೆ. ಅಲ್ಲಿಯ ಮಹತ್ವದ ಕೃತಿಗಳನ್ನು ಹೊರತಂದಿದ್ದೇವೆ. ರೂಪಾಂತರಗೊಳಿಸಿದ್ದೇವೆ ಎಂದು ಹೇಳುವ ಕನ್ನಡಿಗರಿಗೆ-ಕನ್ನಡ ಸಾಹಿತಿಗಳಿಗೆ ನೆರೆಹೊರೆಯ ಭಾಷೆ ತಮಿಳು, ತೆಲುಗು, ಮಲೆಯಾಳಂ, ಕೊಂಕಣಿ, ಮರಾಠಿ ಭಾಷೆಗಳಲ್ಲಿ ಏನು ನಡೆದಿದೆಯೆಂಬುದೇ ಗೊತ್ತಿರುವುದಿಲ್ಲ. ಈ ಭಾಷೆಗಳ ಸಾಹಿತ್ಯ ಕನ್ನಡದಲ್ಲಿ ಬಂದಿರಬಹುದು. ಅದಷ್ಟೇ ಸಾಲದು. ಅಲ್ಲಿಯ ಭಾಷೆಯ ಚಟುವಟಿಕೆಗಳು, ಪ್ರಾದೇಶಿಕ ಸಂಸ್ಕೃತಿಯನ್ನು ಬಿಂಬಿಸುವ ಕಲೆಗಳ ಪರಿಚಯವೂ, ವೈಚಾರಿಕ ನೆಲೆಯ ಅರಿವೂ ನಮಗಿರಬೇಕು. ನಾವು ಸಾಂಸ್ಕೃತಿಕವಾಗಿ ಹತ್ತಿರವಾಗುವಂತಹ ಚಟುವಟಿಕೆಗಳು ನಡೆಯುತ್ತಿದ್ದರೆ ನಮ್ಮಲ್ಲಿರುವ ಭಾಷಾ ದ್ವೇಷ ಕಡಮೆಯಾಗಿ, ರಾಜ್ಯವಿಸ್ತಾರದ ಹಪಹಪಿಕೆ ಪಲ್ಲಟಗೊಂಡು ನಿಜವಾದ ಸ್ನೇಹ ಸೌಹಾರ್ದ ಮೂಡಿ ನೆಮ್ಮದಿಯ ಬದುಕು ಕಾಣಬಹುದು. ಈ ದಿಶೆಯಲ್ಲಿ ಸಾಹಿತಿಗಳು ಕಲಾವಿದರು, ಸಂಸ್ಕೃತಿಯ ಆರಾಧಕರು, ದೇಶದ ಹಿತೈಷಿಗಳು ಕಾರ್ಯೋನ್ಮುಖರಾದರೆ ನಾವು ಒಡೆದು ಹೋದ ಮನಸ್ಸುಗಳನ್ನು ಮತ್ತೆ ಒಂದಾಗಿಸಲು ಪ್ರಯತ್ನಿಸಿದಂತಾಗುತ್ತದೆ.

ನಾನು ಈಗಾಗಲೇ ಕೊಂಕಣಿ ಭಾಷೆಯ ಹಿರಿಯ ಸಾಹಿತಿಗಳಾದ ರವೀಂದ್ರ ಕೆಳೇಕರ್ (ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು) ಡಾ. ರ.ವಿ. ಪಂಡಿತ (ಪದ್ಮಶ್ರೀ), ಡಾ.ಮನೋಹರರಾವ್ ಸರ್‌ದೇಸಾಯಿ, ಚಂದ್ರಕಾಂತ ಕೇಣಿ, ದಾಮೋದರ ಮಾವ್‌ಜೊ, ಲಕ್ಷ್ಮಣರಾವ್ ಸರ್‌ದೇಸಾಯಿ ಮೊದಲಾದವರ ಕೆಲವು ಸಾಹಿತ್ಯ ಕನ್ನಡಕ್ಕೆ ತಂದಿದ್ದೇನೆ. ಕೊಂಕಣಿ ಮತ್ತು ಕನ್ನಡ ಭಾಷಾಬಾಂಧವ್ಯಕ್ಕೆ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ದುಡಿದಿದ್ದೇನೆ. ಕರ್ನಾಟಕ ಮತ್ತು ಗೋವೆಯ ಸಾಂಸ್ಕೃತಿಕ ಸಂಬಂಧ ಚೆನ್ನಾಗಿರಲಿ, ರಾಜಕೀಯ ಸಂಬಂಧಗಳನ್ನು ಬಲಪಡಿಸುವುದರಲ್ಲಿ ರಾಜಕೀಯ ಧುರೀಣರೂ ಮುಂದಾಗಲಿ ಎಂದು ಹಾರೈಸುತ್ತೇನೆ.

''ಚೈತನ್ಯಾಕ ಮಠ ನಾ'' ಮತ್ತು ''ಶ್ರೀ ವಿಚಿತ್ರಾಚಿ ಜಾತ್ರಾ'' ನಾಟಕಗಳನ್ನು ಅನುವಾದಿಸಲು ಅನುಮತಿ ನೀಡಿದ ಪುಂಡಲೀಕ ನಾಯಕ'' ಅವರಿಗೆ ನಾನು ಋಣಿಯಾಗಿದ್ದೇನೆ. ಈ ನಾಟಕಗಳನ್ನು ಅಂದವಾದ ಒಂದು ಸಂಪುಟದಲ್ಲಿ ಕನ್ನಡಿಗರಿಗೆ ನೀಡುತ್ತಿರುವ ಸಾಗರ ಪ್ರಕಾಶನದ ಜನಾರ್ದನ, ಮುಖಚಿತ್ರ ಒದಗಿಸಿದ ಮೋನಪ್ಪ, ಅಕ್ಷರ ಸಂಯೋಜಿಸಿದ ಶಿವಕುಮಾರ್ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

- ಶಾ.ಮಂ. ಕೃಷ್ಣರಾಯ

500, ಸಾಹಿತ್ಯ ಸದನ,
11ನೆಯ ಕ್ರಾಸ್, 5ನೆಯ ಮೇನ್,
ಗಿರಿನಗರ, ಬೆಂಗಳೂರು - 85
ದೂರವಾಣಿ : 080-26422331

## ಮತವಿಲ್ಲದ ಚೈತನ್ಯ

[ಸೋಮಾರಿ ಜನಗಳ ಒಂದು ಊರು. ಊರಿನ ಒಂದು ಬದಿಯಲ್ಲಿ ಜನಗಳ ವ್ಯವಹಾರ ನಡೆದಿದೆ. ಕೆಲವರು ಬೀಡಿ ಸೇದುತ್ತಿದ್ದರೆ, ಕೆಲವರು ಗಡಗಡೆಯ ಮಂಡ ಅಥವಾ ಕೂತು ಆಡುವ ಬೇರೆ ಆಟ ಆಡತೊಡಗಿದ್ದಾರೆ.

ಕೆಲವರು ಕುಳಿತೆಡೆ ಒಬ್ಬ ಬರುತ್ತಾನೆ. ಅಲ್ಲಿ ಕುಳಿತ ಜನಗಳಲ್ಲಿ ಕೂಲಿಕಾರನಂತೆ ಕಾಣುವವನೊಬ್ಬನನ್ನು]

ಮನುಷ್ಯ : ಅಪ್ಪಾ, ಕೊಂಚ ಹೊರೆ ತಲೆ ಮೇಲಿಡೋಕೆ ಸಹಾಯ ಮಾಡ್ತೀಯಾ?

ಕೂಲಿಕಾರ : ಹೊರೆ ? ಎತ್ತಿಡ್ತೀನಿ.....ಯಾರ ತಲೆ ಮೇಲೆ ?

ಮನುಷ್ಯ : ನಿನ್ನ.

ಕೂಲಿಕಾರ : ನನ್ನ ?

ಮನುಷ್ಯ : ನೀನು ಕೂಲಿಯವನಲ್ಲವೆ ?

ಕೂಲಿಕಾರ : ಹೌದು. ನಾನು ಕೂಲಿಕಾರ ನಿಜ. ಆದರೆ ಹೊತ್ತುಕೊಂಡು ಹೋಗುವವನು ಅಲ್ಲ. ನನಗೆ ಕತ್ತು ನೋವು ಬರತ್ತೆ.

ಮನುಷ್ಯ : ಬೇರೆ ಕೂಲಿಕಾರ ಎಲ್ಲಿ ಸಿಗಬಹುದು ?

ಕೂಲಿಕಾರ : ಇಲ್ಲಂತೂ ಯಾರೂ ಸಿಗಲಿಕ್ಕಿಲ್ಲ.

(ಇತರರೂ ಕತ್ತು ಅಲ್ಲಾಡಿಸಿ "ಇಲ್ಲ"ವೆಂದು ಹೇಳುತ್ತಾರೆ. ಬೇರೆ ಕಡೆಗೆ ಯಾರಾದರೂ ಸಿಗ್ತಾರೆಯೋ ನೋಡಿ.)

(ಆ ಮನುಷ್ಯ ಅಲ್ಲಿಂದ ಹೋಗುತ್ತಾನೆ.)

(ಅದೇ ರೀತಿಯಲ್ಲಿ ಕೆಲವರು ಕುಳಿತುಕೊಂಡಿದ್ದಾರೆ. ಒಕ್ಕಲಿಗನಂತೆ ಕಾಣುವ ಒಬ್ಬ ಬರುತ್ತಾನೆ. ಕುಳಿತವರನ್ನು ಮಾತಾಡಿಸುತ್ತಾನೆ)

ಒಕ್ಕಲಿಗ : ಬರ್ತೀರಾ ಕೆಲಸಕ್ಕೆ ?

ಒಬ್ಬ : ಯಾವ ಕೆಲಸ ?

ಒಕ್ಕಲಿಗ : ತೋಟದಲ್ಲಿ ಹೊಂಡ ತೆಗೆಯೋದಿದೆ.

ಎರಡನೆಯವ : ಹೊಂಡ ?

ಮೂರನೆಯವ : ಹೊಲದಲ್ಲಿ ಆಗೆಯುವುದಾದರೆ ಬರ್ತಿದ್ದವು.

ನಾಲ್ಕನೆಯವ : ತೋಟದಲ್ಲಿ ಅಗೆಯುವುದೆಂದರೆ-ಕಲ್ಲು ಗುಂಡುಗಳಿರುತ್ತವೆ. ಕೈಗೆ ಬೊಕ್ಕೆಗಳೇಳುತ್ತವೆ ?

ಒಕ್ಕಲಿಗ : ಹೊಲದೊಳಗೆ ಕೆಲಸ ಮಾಡುವವರಿಗೆ ಸಿಗೊ ದಿನಗೂಲಿ ಅಲ್ಲ. ಜಾಸ್ತಿ ಇರುತ್ತೆ.

ಮೊದಲನೆಯವ : ದಿನಗೂಲಿ ಇದ್ದುಕೊಳ್ಳಲಿ ಬಿಡಿ. ತುಂಬ ಕಷ್ಟ ಪಡಬೇಕಾಗುತ್ತೆ.

(ಎಲ್ಲರೂ ಕತ್ತು ತೂಗಿಸಿ 'ಹೌದು' ಎನ್ನುತ್ತಾರೆ. ಒಕ್ಕಲಿಗ ಅಲ್ಲಿಂದ ಹೋಗುತ್ತಾನೆ.)

(ಒಂದು ಕಡೆ ಒಬ್ಬನು ಸುಮ್ಮನೆ ಕುಳಿತಿದ್ದಾನೆ. ಅಲ್ಲಿ ಮತ್ತೊಬ್ಬ ಮಾತಾಡಿಸುತ್ತಾನೆ.)

ಎರಡನೆಯವ : ಹೊಲದ ಕೆಲಸಕ್ಕೆ ಬರ್ತೀಯಾ ?

ಮೊದಲನೆಯವ : ಎಲ್ಲಿ ?

ಎರಡನೆಯವ : ಅಲ್ಲಿ-ನದಿಯ ಆಚೆ.

ಮೊದಲನೆಯವ : ಅಬ್ಬಾ ಅಷ್ಟು ದೂರವೇ ? ಹತ್ತಿರ ಎಲ್ಲಾದರೂ ಇದ್ರೆ ಹೇಳು.

ಎರಡನೆಯವ : ನಿನಗಾಗಿ ಹೊಲ ಎತ್ತಿ ಇಲ್ಲಿ ತರಲೆ ?

(ಸಿಟ್ಟಿನಿಂದ ಹೋಗುತ್ತಾನೆ)

(ಒಂದು ಕಡೆ ಒಬ್ಬ ಕಥೆ ಹೇಳುತ್ತಿದ್ದಾನೆ. ಮಿಕ್ಕವರು ಕೇಳುವುದರಲ್ಲಿ ತಲ್ಲೀನರಾಗಿದ್ದಾರೆ.)

ಕತೆಗಾರ : ರಾಜನ ರಾಜ್ಯದಲ್ಲಿ ಎಲ್ಲಾ ತರದ ಜನಗಳು ಇದ್ದರು. ಒಕ್ಕಲಿಗರು ಹೊಲದ ಕೆಲಸ ಮಾಡುತ್ತಿದ್ದರು. ವ್ಯಾಪಾರಿಗಳು ವ್ಯಾಪಾರ ಮಾಡಿಕೊಂಡಿದ್ರು. ಮೇಷ್ಟ್ರುಗಳು ಮಕ್ಕಳನ್ನು ಓದಿಸುತ್ತಿದ್ದರು. ವೈದ್ಯರು ರೋಗಿಗಳಿಗೆ ರೋಗಮುಕ್ತರನ್ನಾಗಿ ಮಾಡುತ್ತಿದ್ದರು. ಬುದ್ಧಿವಂತ ಜನ ರಾಜನಿಗೆ ಒಳ್ಳೆಯ-ಕೆಟ್ಟ ಸಲಹೆ ಕೊಡುತ್ತಿದ್ದರು. ರಾಜ್ಯದಲ್ಲಿದ್ದ ಪ್ರತಿಯೊಬ್ಬ ಮನುಷ್ಯನೂ ಏನಾದರೊಂದು ಕೆಲಸ ಮಾಡಿಕೊಂಡಿರುತ್ತಿದ್ದ. ಯಾರೂ ಕೆಲಸ ಮಾಡದೆ ಕುಳಿತು ಕೊಳ್ಳುತ್ತಿರಲಿಲ್ಲ. ಈ ರಾಜ್ಯದ ಜನ ದುಡಿದು ದುಡಿದು ಬದುಕುತ್ತಾರೆಂಬ ಖ್ಯಾತಿಯಿತ್ತು. ಒಂದು ದಿನ ರಾಜ್ಯದಲ್ಲೆಲ್ಲ ಓಡಾಡಿ ಬಂದ ಸುಂದರ ಸ್ತ್ರೀಗೆ ತನ್ನ ಕತ್ತಿನಲ್ಲಿದ್ದ ಬಂಗಾರದ ಬಗ್ಗೆ ಹಮ್ಮು ಬರುವಂತೆ ಆ ರಾಜನಲ್ಲಿ ಹಮ್ಮು ಬಂತು. ರಾಜನು ತನ್ನ ಪ್ರಧಾನಮಂತ್ರಿಗೆ ಹೇಳಿದ. ನೋಡಿದೆಯಾ ನಮ್ಮ ರಾಜ್ಯದ ಸ್ಥಿತಿ. ಇಲ್ಲಿ ಯಾರೂ ಕೆಲಸ ಮಾಡದೆ ಸುಮ್ಮನೆ ಕೂರುವುದಿಲ್ಲ. ನಮ್ಮ ರಾಜ್ಯದಲ್ಲಿ ಒಬ್ಬ ಸೋಮಾರಿಯೂ ಇಲ್ಲ. ಇದು ನಾಚಿಕೆ ಪಡ ಬೇಕಾದ ವಿಚಾರ. ಇಂಥ ದೊಡ್ಡ ರಾಜ್ಯದಲ್ಲಿ ಯಾರಾದರೊಬ್ಬ

ಸೋಮಾರಿ ಮನುಷ್ಯ ಇರಲೇಬೇಕು. ನಾವು ರಾಜ್ಯದಲ್ಲಿ ಡಂಗುರ ಸಾರಿ ಸೋಮಾರಿಗಳನ್ನೆಲ್ಲ ಒಂದು ಕಡೆಗೆ ಸೇರುವಂತೆ ಮಾಡೋಣ. ಅದರಂತೆ ರಾಜ್ಯದಲ್ಲೆಲ್ಲ ಡಂಗುರ ಹೊಡಿಸಲಾಯಿತು. ರಾಜ್ಯದಲ್ಲಿ ಯಾರಾದರೂ ಸೋಮಾರಿಗಳಿದ್ದರೆ ಅವರು ಇಂಥ ದಿನ, ಇಂಥ ಸಮಯದಲ್ಲಿ ರಾಜನ ಆಸ್ಥಾನದಲ್ಲಿ ಹಾಜರಿರುವುದು - ಯಾರು ಆಲಸ್ಯದಿಂದ ರಾಜ ದರ್ಬಾರಕ್ಕೆ ಬರಲು ಸಿದ್ಧರಾಗುವುದಿಲ್ಲವೊ ಅಂಥವರನ್ನು ಅವನ ಮನೆಯವರು ಒತ್ತಾಯದಿಂದ ರಾಜದರ್ಬಾರಕ್ಕೆ ಕರೆದು ತರುವುದು. ಅದರಂತೆ ರಾಜನ ದರ್ಬಾರದಲ್ಲಿ ಅಂದು ಸೋಮಾರಿಗಳೆಲ್ಲ ಕಿಕ್ಕಿರಿದು ಸೇರಿದ್ದರು. ಬಹು ಸಂಖ್ಯಾತರು ತಾವಾಗಿಯೇ ಬಂದಿದ್ದರು. ಕೆಲವರನ್ನು ಮಾತ್ರ ಭುಜಕ್ಕೆ ಭುಜಕೊಟ್ಟು, ಕೆಲವರನ್ನು ಬೆನ್ನಿಗೇರಿಸಿ, ಕೆಲವರನ್ನು ಅಕ್ಷರಶಃ ಹೊತ್ತು ತರಲಾಗಿತ್ತು. ಇಷ್ಟೊಂದು ಸೋಮಾರಿ ಜನಗಳನ್ನು ನೋಡಿ ರಾಜನಿಗೆ ಖುಷಿಯಾಗಲು ಅವನ ಎದೆ ಅಭಿಮಾನದಿಂದ ಉಬ್ಬಿತು. ಆದರೆ ತಕ್ಷಣ ರಾಜನ ಮುಖ ಕಮಲ ಬಾಡಿತು. ಹಣೆಯ ಮೇಲೆ ಗೆರೆಗಳುದಿಸಿದವು. ರಾಜನು ಪ್ರಧಾನಮಂತ್ರಿಗೆ ತನ್ನ ಚಿಂತೆಯ ಕಾರಣ ಹೇಳಿದ. "ಪ್ರಧಾನರೇ, ಇವರೆಲ್ಲರೂ ಸೋಮಾರಿಗಳು ಅಂತ ಹೇಗೆ ಹೇಳೋದು ? ರಾಜನು ತಮಗೆ ಸುಖವಾಗಿ ಊಟ ತಿಂಡಿಯ ವ್ಯವಸ್ಥೆ ಮಾಡಬಹುದೆಂಬ ಆಶೆಯಿಂದ ಇವರೆಲ್ಲ ಸೋಮಾರಿಯ ಸೋಗು ಹಾಕಿರಬಹುದು." ಆಗ ಪ್ರಧಾನಮಂತ್ರಿ ಮಹಾರಾಜರಿಗೆ ಹೇಳಿದರು, 'ನೀವು ಚಿಂತೆ ಮಾಡಬೇಡಿ. ನಾನೆಲ್ಲ ನೋಡಿಕೊಳ್ತೀನಿ' ಎಂದು ಹೇಳಿ ಆ ಸೋಮಾರಿಗಳನ್ನೆಲ್ಲ ಒಂದು ವಿಶಾಲ ಮನೆಯಲ್ಲಿ ಒಯ್ದಿಟ್ಟ. ಆಲಸಿಗಳಿಗೆ ಊಟ - ಉಪಚಾರ ಪುಕ್ಕಟೆ ಸಿಗತೊಡಗಿತು. ಹೀಗೆ ಎಷ್ಟೊ ದಿನಗಳು ಗತಿಸಿದವು. ಒಂದು ದಿನ ಪ್ರಧಾನಮಂತ್ರಿಯು ಆ ಮನೆಗೆ ಬೆಂಕಿ ಹಚ್ಚಿದ. ತಕ್ಷಣ ಇಲಿಗಳು ಹೊರಬೀಳುವ ಹಾಗೆ ಎಲ್ಲ ಸೋಮಾರಿಗಳು ಜೀವದಾಶೆಯಿಂದ ಓಡಿ ಹೋದರು. ಆದರೆ ಒಬ್ಬನು ಮಾತ್ರ ಮಂಚದ ಮೇಲೆ ಹಾಯಾಗಿ ಯಾವ ಪರಿವೆಯೂ ಇಲ್ಲದೆ ಬಿದ್ದುಕೊಂಡಿದ್ದ. ಅವನಿಗೆ ನಿದ್ದೆ ಬಂದಿರಲಿಲ್ಲ. ಬೆಂಕಿ ತನ್ನ ಮಂಚಕ್ಕೆ ತಾಗಿದೆಯೆಂದು ಅವನಿಗೆ ಗೊತ್ತಿತ್ತು. ಮಿಕ್ಕವರು ಓಡಿ ಹೋಗಿದ್ದೂ ಅವನಿಗೆ ಗೊತ್ತಿತ್ತು. ಆದರೆ ಎದ್ದು ನಡೆಯಬೇಕಲ್ಲ ಎಂಬ ಬೇಜಾರಿನಿಂದಾಗಿ ಅವನು ಅಲ್ಲೆ ಬಿದ್ದುಕೊಂಡಿದ್ದ. ಪ್ರಧಾನಮಂತ್ರಿ ಅವನನ್ನು ಎತ್ತಿ ಕೊಂಡೊಯ್ದು

ಮಹಾರಾಜರ ಮುಂದೆ ನಿಲ್ಲಿಸಿದ. ನಮ್ಮ ರಾಜ್ಯದಲ್ಲಿ ಒಬ್ಬನೇ ಒಬ್ಬ ಸೋಮಾರಿ ಇದ್ದಾನೆ. ಅವನೇ ಇವನು ಎಂದು ಪ್ರಧಾನಿ ರಾಜನಲ್ಲಿ ಅರಿಕೆ ಮಾಡಿಕೊಂಡನು. ರಾಜನಿಗೆ ಅತ್ಯಂತ ಆನಂದವಾಗಿ ಅವನನ್ನು ತನ್ನ ಹತ್ತಿರ ಕೂಡಿಸಿಕೊಂಡು ಅವನನ್ನು ಸನ್ಮಾನಿಸಿದ. (ಅಭಿಮಾನದಿಂದ) ಆ ಸೋಮಾರಿ ಮನುಷ್ಯ ಯಾವ ಊರಿನವನಾಗಿದ್ದ ನಿಮಗೆ ಗೊತ್ತುಂಟೆ ? ಆತ ನಮ್ಮೂರಿನವನೇ ಆಗಿದ್ದ. ಆತನೇ ನಮ್ಮ ಪೂರ್ವಜ.

ಒಬ್ಬವ : ಆ ಮನುಷ್ಯ ನಮ್ಮ ಪೂರ್ವಜ, ನಮ್ಮ ಊರಿನವರೇ ಎಂದು ಹೇಳಲು ಏನ್ ದಾಖಲೆಯಿದೆ ?

ಕತೆಗಾರ : ಮತ್ತ ಬೇರೆ ದಾಖಲೆ ಯಾಕೆಬೇಕು ? ನಮ್ಮನ್ನು ನಿಮ್ಮನ್ನು ನೋಡಿದ್ರೇ ಗೊತ್ತಾಗುತ್ತೆ.

(ಎಲ್ಲರೂ ಖುಷಿಯಿಂದ ನಗುತ್ತಾರೆ. ಅಷ್ಟರಲ್ಲಿ ಒಬ್ಬನು ಓಡುತ್ತ ಬರುತ್ತಾನೆ. ಅವನ ಹೆಸರು ಅಂಕುಶ. ಆ ಊರಿನ ಜನಗಳ ವೇಷಭೂಷಣಕ್ಕಿಂತ ಭಿನ್ನವಾದ ವೇಷಭೂಷಣದಲ್ಲಿ ಅಂಕುಶ. ಅವನ ಹಾವಭಾವದಲ್ಲಿ ಒಂದು ಬಗೆಯ ಲವಲವಿಕೆ ಇದೆ.)

ಅಂಕುಶ : ಸ್ವಾಮಿ ಚೈತನ್ಯಕುಮಾರ ಮಹಾರಾಜ ಕೀ ಜಯ.

(ಜನ ತಮ್ಮ ತಮ್ಮ ಕೆಲಸ ಬಿಟ್ಟು ಅವನ ಕಡೆ ಚಕಿತರಾಗಿ ಅವನ ಸುತ್ತಲೂ ಕೂಡುತ್ತಾರೆ)

ಅಂಕುಶ : ಸ್ವಾಮಿ ಚೈತನ್ಯಕುಮಾರ ಮಹಾರಾಜರು ಈ ಊರಿಗೆ ಬರಲಿದ್ದಾರೆ. ಅವರು ಹಾಗೆ ಘೋಷಣೆ ಮಾಡಿದ್ದಾರೆ.

ಜನ : ಸ್ವಾಮಿ ಚೈತನ್ಯಕುಮಾರ ?

ಅಂಕುಶ : ಸ್ವಾಮಿ ಚೈತನ್ಯಕುಮಾರರು ಯಾರೆಂದು ಜಗತ್ತಿಗೇ ಗೊತ್ತಿದೆ.

(ಜನ ಗೊಂದಲದಲಿ ಬೀಳುತ್ತಾರೆ.)

ಅಂಕುಶ : ಸ್ವಾಮಿ ಚೈತನ್ಯಕುಮಾರರ ಪರಿಚಯವಿಲ್ಲದ ಒಂದು ಇರುವೆ - ಮತ್ತು ನೊಣ ಕೂಡ ಇಲ್ಲ.

(ಅಲ್ಲಿ ಕುಳಿತವರೆಲ್ಲರೂ ತಮ್ಮಲ್ಲಿ ತಾವೇ ಯೋಚಿಸತೊಡಗುತ್ತಾರೆ)

ಅಂಕುಶ : ಸ್ವಾಮಿ ಚೈತನ್ಯಕುಮಾರ !

ಜನ : ಹೌದು ಹೌದು.....ನಮಗೆ ಅವರ ಪರಿಚಯವಿದೆ. ನಾವು ಅವರ ಹೆಸರು ಕೇಳಿದ್ದೇವೆ.

ಅಂಕುಶ : ಸ್ವಾಮಿ ಚೈತನ್ಯಕುಮಾರರು ನಿಮ್ಮೂರಿಗೆ ಬರಲಿದ್ದಾರೆ.

ಜನ : ಸ್ವಾಮಿಗಳು ನಮ್ಮೂರಿಗೆ ಬರುತ್ತಾರೆಯೆ ?

(ಜನರಿಗೆ ತುಂಬ ಖುಷಿಯಾಗಿದೆ. ಅದೇ ವಿಷಯವನ್ನು ಅವರು ತಮ್ಮ ತಮ್ಮಲ್ಲಿ ಹೇಳಿಕೊಳ್ಳುತ್ತಾರೆ. ಅವರವರಲ್ಲಿಯೇ ಗದ್ದಲ ಆರಂಭ ವಾಗುತ್ತದೆ. ಆ ಗದ್ದಲದಲ್ಲಿ ಅವರಿಗೆ ಅರಿವಿಲ್ಲದೆ ದೂರವಿಡುತ್ತಾರೆ. ಅಂಕುಶ ಒಂದು ಬದಿಯಲ್ಲಿ ನಿಂತು ಅವರನ್ನೊಮ್ಮೆ ಅರ್ಥಪೂರ್ಣವಾಗಿ ನೋಡಿ ಅಲ್ಲಿಂದ ಹೊರಟು ಹೋಗುತ್ತಾನೆ. ಕ್ರಮೇಣ ಗದ್ದಲ ಕಡಮೆ ಯಾಗುತ್ತದೆ.....ಒಬ್ಬೊಬ್ಬರು ಬಾಯಿ ಬಿಡುತ್ತಾರೆ)

ಒಬ್ಬವ : ನಾನು ಸ್ವಾಮಿಗಳ ಬಗ್ಗೆ ತುಂಬ ಕೇಳಿದ್ದೇನೆ. ಅವನು ಮುಷ್ಟಿಯಿಂದ ವಿಭೂತಿ ಹೊರತೆಗೀತಾನಂತೆ.

ಜನ : (ಏನೂ ಅಲ್ಲವೆಂಬಂತೆ) ವಿಭೂತಿ ?

ಒಬ್ಬವ : ಮೊದಲು ವಿಭೂತಿ, ಆಮೇಲೆ ಬಂಗಾರದ ಉಂಗುರ ಅನಂತರ ಬಂಗಾರದ ಚೈನ.....

(ಜನ ಆಶ್ಚರ್ಯ ಚಕಿತರಾಗುತ್ತಾರೆ)

ಎರಡನೆಯವ : ನಾನೂ ಹಾಗೇ ಕೇಳಿದ್ದೇನೆ. ಆದರೆ ಈ ಸ್ವಾಮಿಯಿಂದ ಗೋದಿಯ ಅಥವಾ ಅಕ್ಕಿಯ ಚೀಲ ತೆಗೆಯಲು ಸಾಧ್ಯವಿಲ್ಲವಂತೆ.

ಒಬ್ಬವ : ಥತ್ ಬಕಾಸುರರೇ. ಅಕ್ಕಿ ಮತ್ತು ಗೋಧಿ ಚೀಲ ಹೊರ ತೆಗೆಯಲು ಅವನೇನು ನಮ್ಮ ನಿಮ್ಮಂತೆ ದರಿದ್ರರ ಸ್ವಾಮಿಯಲ್ಲ. ದೊಡ್ಡವರ ಸ್ವಾಮಿ. ಅವರು ದೊಡ್ಡವರಿಗೆ ಬೇಕಾದ ವಸ್ತುಗಳನ್ನೇ ತಯಾರಿಸ್ತಾರೆ.

ಮೂರನೆಯವ : ನಾನು ಕೇಳಿದ್ದೀನಿ ಅವನ ಆ ಸಡಿಲವಾದ ನಿಲುವಂಗಿಯಿಂದಲೇ ಒಂದೊಂದು ವಸ್ತು ಹೊರಬರುತ್ತವೆಯೆಂದು (ಎರಡನೆಯವನನ್ನು ಕುರಿತು) ನಿನ್ನ ಅಕ್ಕಿ ಮತ್ತು ಗೋದಿಯ ಚೀಲ ಆ ನಿಲುವಂಗಿಯಲ್ಲಿ ಎಲ್ಲಿ ಹಿಡಿಯುತ್ತವೆ ?

ನಾಲ್ಕನೆಯವ : ಆ ನಿಲುವಂಗಿಯಲ್ಲಿ ಈ ವಸ್ತುಗಳು ಹೇಗೆ ಸೇರಿಕೊಳ್ತವೆ ?

ಮೂರನೆಯವ : ಚಮತ್ಕಾರ.

ಐದನೆಯವ : ಯಾವುದೇ ಕಾಯಿಲೆಯ ಮೇಲೆ ಸ್ವಾಮಿ ಔಷಧಿ ಕೊಡ್ತಾನೆಂದು ಹೇಳ್ತಾರೆ. ಇದೇನು ಸುಳ್ಳಲ್ಲ.

ಮೊದಲನೆಯವ : ಔಷಧಿಗಳಂದ್ರೆ ಮಾತ್ರೆಗಳು, ಇಂಜಕ್ಶನ್‌ಗಳಲ್ಲ. ಕೇವಲ ಬೂದಿ ಮತ್ತು ಯಾವುದೇ ಕಾಯಿಲೆ ಇರಲಿ. ಇವಿಷ್ಟು ತಗೊಂಡ್ರಾಯ್ತು ಅಡ್ಡಬಿದ್ದವ ಎದ್ದು ನಿಲ್ತಾನೆ.

ಮೂರನೆಯವ : ಅಂದರೆ ? ವೈದ್ಯರು ಮತ್ತು ಆಸ್ಪತ್ರೆಗಳ ಅಗತ್ಯ ಇಲ್ಲ ಅಲ್ಲವೆ ?

ಮೊದಲನೆಯವ : ಸ್ವಾಮಿಗಳಿದ್ದರೆ ಇಲ್ಲವೆ ಇಲ್ಲ. ಕೆಲವು ಡಾಕ್ಟರರಂತೂ ದೊಡ್ಡ ದೊಡ್ಡ ಆಪರೇಶನ್ ಇತ್ಯಾದಿ ಮಾಡುವಾಗ ಸ್ವಾಮಿಗಳ ಸಲಹೆ ಕೇಳ್ತಾರೆ.

ಆರನೆಯವ : ಸ್ವಾಮಿಗಳ ಒಂದು ಮಾತು ನಾನು ನನ್ನ ಕಿವಿಯಾರೆ ಕೇಳಿದ್ದೀನಿ. ಒಂದ್ ಬಾರಿ ಸ್ವಾಮಿಗಳು ಶಿಷ್ಯ ಸಮೇತರಾಗಿ ಪ್ರವಾಸಕ್ಕೆ ಹೊರಟಿದ್ದರು. ಆದರೆ ದಾರೀಲಿ ಆಕಸ್ಮಿಕವಾಗಿ ರಥದ ಎಣ್ಣೆ ಮುಗಿದುಹೋಯ್ತು. ಸ್ವಾಮಿಗಳು ರಥ ನಿಲ್ಲಿಸಿದರು ರಥದಲ್ಲಿದ್ದ ಖಾಲಿ ಡಬ್ಬೆಯನ್ನು ತೆಗೆದುಕೊಂಡು ಹತ್ತಿರದ ಬಾವಿಗೆ ಹೋಗಿ ನೀರು ತುಂಬ್ಕೊಂಡು ಬಂದು ಎಣ್ಣೆಯ ಟ್ಯಾಂಕಿಗೆ ಸುರಿದರು. ನೋಡೋದೇನು - ರಥ ಮುಂದಕ್ಕೆ ಹೋಯಿತು. ಪ್ರವಾಸ ಪ್ರಾರಂಭ.

ಐದನೆಯವ : ನಿನ್ನ ಮಾತು ಸುಳ್ಳಲ್ಲ. ಆದರೆ ಸ್ವಾಮಿಗಳು ಪ್ರವಾಸ ಮಾಡುತ್ತಿದ್ದುದು ರಥದಲ್ಲಿ ಅಲ್ಲ ಅದು ಕಾರ್. ದೇವರಿಗೆ ಮಾತ್ರ ರಥ ಇರುತ್ತೆ. ಅಲ್ಲದೆ ರಥಕ್ಕೆ ಎಣ್ಣೆ ಬೇಕಾಗೊಲ್ಲ. ಕುದುರೆಗಳು ಬೇಕಾಗ್ತವೆ.

ಆರನೆಯವ : ಅದೇನೇ ಇರಲಿ. ಸ್ವಾಮಿಗಳು ನೀರನ್ನೆ ಎಣ್ಣೆಯನ್ನಾಗಿ ಮಾರ್ಪಡಿಸಿದ್ದು ನಿಜ.

ಏಳನೆಯವ : ಈಗ ನಾನ್ ಹೇಳ್ತಿರೋ ಮಾತು ಕಂಣಾರೆ ಕಂಡಿದ್ದು. ಆದರೆ ನಾನಲ್ಲ. ಸ್ವಾಮಿಗಳ ಹತ್ತಿರ ಹೋದ ಹೆಣ್ಣು ಮಕ್ಕಳು ಎಂದೂ ಬರಿಗೈಲಿ ಬರುವುದಿಲ್ಲ. ಅವರಿಗೆ ಇಚ್ಛೆಯಿಲ್ಲದಿದ್ದರೂ ಸ್ವಾಮಿಗಳ ಆಶೀರ್ವಾದದಿಂದ ಮಕ್ಕಳಾಗುತ್ತವೆ. ಹೆಚ್ಚಾಗಿ ಹೆಣ್ಣುಮಕ್ಕಳು ತಮಗೆ ಗಂಡುಮಕ್ಕಳು ಹುಟ್ಟಬೇಕೆಂದು ಸ್ವಾಮಿಗಳ ಹತ್ತಿರ ಹೋಗುತ್ತಾರೆ. ಅಂಥವರಿಗೆ ತಪ್ಪದೆ ಗಂಡು ಸಂತಾನವಾಗುವುದು ಉಂಟು ! ಒಂದು ದಿನ ಒಂದು ವಿಚಿತ್ರ ಘಟನೆ ನಡೀತು. ಒಂದು ಹೆಂಗಸು ಸ್ವಾಮಿಗಳ ಬಳಿ ತನಗೆ ಗಂಡು ಮಗ ಬೇಕೆಂದು ಬೇಡಿದಳಂತೆ. ಆ ಹೆಂಗಸಿನ ಹೆರಿಗೆಯಲ್ಲಿ ಸರಿಯಾಗಿ ಹೆಣ್ಣು ಮಗೂನೆ ಹುಟ್ಟಬೇಕೆ ? ಆ ಎಳೆಯ ಮಗೂವನ್ನೊಯ್ದು ಸ್ವಾಮಿಗಳ ಕಾಲುಗಳ ಮೇಲೆ ಹಾಕಿದರು. ಸ್ವಾಮಿಗಳು ಕಣ್ಣು ಮುಚ್ಚಿ ಅತ್ತ ಇತ್ತ ಕೈಯಾಡಿಸಿದರಂತೆ. ಮೋಟು ಬೀಡಿಯಂಥದ್ದೇನೊ ಮಂತ್ರಿಸಿ ಆಕೆಯ ಕೈಯಲ್ಲಿಟ್ಟು ಆ ಮಗೂಗೆ ಅಂಟಿಸು ಎಂದು ಹೇಳಿದರಂತೆ. ಯಾರೂ ನಂಬಲಾರದ್ದೇನು ನಡೀತು ಗೊತ್ತೆ ? ಹೆಣ್ಣು ಮಗು ಗಂಡು ಮಗುವಾಗಿ ಬಿಡ್ತಂತೆ. ಇದನ್ನು ಕಂಣಾರೆ ನೋಡಿದವರಿದ್ದಾರೆ. ನಾನಲ್ಲ.

ಜನ : ಹುಡುಗನಾಗಲಿ, ಹುಡುಗಿಯಾಗಲಿ. ಅದು ನಮ್ಮ ಮುಖ್ಯ ಉದ್ದೇಶವಲ್ಲ. ಅದು ಸಂಸಾರಿಗಳ ಸಮಸ್ಯೆ. ಮಕ್ಕಳು ಬೇಕೂಂತ ಹಪಹಪಿಸುವವರು ಅವರು, ನಾವಲ್ಲ.

: ಒಂದ್‌ಮಾತ ನನಗೆ ಹೇಳಿ, ದೇವದೇವತೆಗಳೆಲ್ಲ ಸ್ವಾಮಿಗಳ ತಟ್ಟೆಯಲ್ಲಿ ಊಟ ಮಾಡ್ತಾರೆ ಎಂದು ಹೇಳ್ತಾರೆ. ಅದು ನಿಜವೇ ?

ಮೊದಲನೆಯವ : ಹೌದು ಹೌದು. ಇದು ಅಪ್ಪಟ ಸತ್ಯ. ನೋಡಿ ಸ್ವಾಮಿಗಳಿಗೆ ಎಂದು ತಯಾರಿಸಿಟ್ಟ ಊಟದ ತಟ್ಟೆಯಲ್ಲಿದ್ದುದನ್ನು ಮೊದಲು ದೇವ ದೇವತೆಗಳು ರುಚಿ ನೋಡುತ್ತಾರೆ. ಆಮೇಲೆ ಸ್ವಾಮಿಗಳು ಊಟ ಮಾಡ್ತಾರೆ. ಆಮೇಲೆ ಮಿಕ್ಕ ಎಂಜಲವನ್ನು ಪ್ರಸಾದವೆಂದು ಎಲ್ಲ ಭಕ್ತರಿಗೆ ಹಂಚುತ್ತಾರೆ.

: ಸ್ವಾಮಿ ಪ್ರತ್ಯಕ್ಷ ದೇವರ ಹತ್ರಾನೇ ಮಾತಾಡ್ತಾರೆಯೆ ?

ಎರಡನೆಯವ : ಹೌದು ಹೌದು ಮಾತಾಡ್ತಾರೆ, ದೇವರೂ ಸ್ವಾಮಿಗಳ ಹತ್ತಿರ ಮಾತಾಡ್ತಾರೆ.

: ಯಾವ ಭಾಷೆಯಲ್ಲಿ ?

ಎರಡನೆಯವ : ಗೊತ್ತಿಲ್ಲ. ಅದು ಸ್ವಾಮಿಗಳಿಗೆ ಮತ್ತು ದೇವರಿಗೆ ಮಾತ್ರ ಗೊತ್ತು.

: ಭೂತ ಇಳಿಸುತ್ತಾರೆಯೆ ?

ಮೂರನೆಯವ : ಇಂಥ ಚಿಕ್ಕ ಪುಟ್ಟ ಪ್ರಯೋಜನವಿಲ್ಲದ ಕೆಲಸ ಭೂತ ಮಾಂತ್ರಿಕರು ಮಾಡ್ತಾರೆ. ಅದಕ್ಕೆ ಸ್ವಾಮಿ ಯಾಕೆ ಬೇಕು ?

: ಸ್ವಾಮಿ ಹೇಗೆ ಕಾಣ್ತಾರೆ (ಸ್ವಾಮಿ ಹೇಗಿದ್ದಾರೆ ?)

: ಸ್ವಾಮಿಗಳನ್ನು ಗುರುತಿಸೋದು ಹೇಗೆ ?

ಅಜ್ಜ : (ಮುಂದೆ ಬಂದು) ನಾನು ಆಗಿನಿಂದ ನಿಮ್ಮ ಮಾತು ಕೇಳ್ತಾ ಇದ್ದೀನಿ. ಮಾತು ಕೇಳಿದ ಹಾಗೆ ಗೊಂದಲ ಜಾಸ್ತಿಯಾಗ್ತಾ ಇದೆ. ನನಗೆ ಹೇಳಿ, ನೀವು ಅಷ್ಟೊತ್ತಿನಿಂದ ಹೇಳ್ತಾ ಇರುವ ಮಾತುಗಳೆಲ್ಲ ಒಬ್ಬ ಸ್ವಾಮಿಗೆ ಸಂಬಂಧಿಸಿದ್ದೆ. ಅಥವಾ ಬೇರೆ ಬೇರೆ ಸ್ವಾಮಿಗಳಿಗೆ ಸಂಬಂಧಿಸಿದ್ದೆ? ಈ ಇವೆಲ್ಲ ಬೇರೆ ಬೇರೆ ಸ್ವಾಮಿಗಳಿಗೆ ಸಂಬಂಧಿಸಿದ್ದೂ ಇರ ಬಹುದು. ಯಾಕಂದ್ರೆ ನಮ್ಮ ದೇವರುಗಳು ಸಾವಿರಾರು ಇದ್ದ ಹಾಗೆ ಸ್ವಾಮಿಗಳೂ ಸಾವಿರಾರಿದ್ದಾರೆ. ಧರ್ಮಕ್ಕೆ ಸಂಬಂಧಿಸಿದ ಸ್ವಾಮಿಗಳು ಬೇರೆ. ಪಂಥಕ್ಕೆ ಸಂಬಂಧಿಸಿದ ಸ್ವಾಮಿಗಳು ಬೇರೆ. ಕೆಲ ಸ್ವಾಮಿಗಳು ಪಟ್ಟಕ್ಕೆ ಬಂದವರಿದ್ದರೆ ಕೆಲವರು ಹೊಟ್ಟೆಗಾಗಿ ಬಂದವರು. ಇವೆಲ್ಲ ಸ್ವಾಮಿಗಳಲ್ಲಿ ನಮ್ಮ ಊರಿಗೆ ಬರುವ ಸ್ವಾಮಿಗಳು ಯಾರು ?

(ಇಷ್ಟು ದೊಡ್ಡ ಹರಟೆಯಲ್ಲಿ ಮಗ್ನರಾಗಿದ್ದ ಜನ ಈಗ ಎಚ್ಚರಾಗುತ್ತಾರೆ)

ಒಬ್ಬವ : ಸ್ವಾಮಿಗಳು ನಮ್ಮೂರಿಗೆ ಬರ್ತಾರೆ ಅಂತ ಹೇಳಿದ್ದು ಯಾರು ?

(ಒಬ್ಬರಿಗೊಬ್ಬರು ಕೇಳಿಕೊಳ್ಳುತ್ತಾರೆ)

: ಹಾಗೆ ಹೇಳಿದವನು ನಮ್ಮವನಲ್ಲ. ನಾನು ಅವನನ್ನು ನೋಡಿದ್ದೇನೆ.

: ನಾನೂ ನೋಡಿದ್ದೇನೆ.

(ತಾವು ನೋಡಿದ್ದಾಗಿ ಅನೇಕರು ಹೇಳುತ್ತಾರೆ)

: ಆತ ಎತ್ತರವಾಗಿದ್ದಾನೆ.

: ಅಲ್ಲ, ಹಾಗೆ ನೋಡಿದ್ರೆ ತುಂಬ ಗಿಡ್ಡ.

: ಮೈಕೈಯಲ್ಲಿ ತುಂಬಿಕೊಂಡಿದ್ದಾನೆ.

: ಹಾಗಲ್ಲ, ತುಂಬಿಕೊಂಡಿದ್ದಾನೆ ಅಂದ್ರೂ ಬಡಕಲು ಮನುಷ್ಯ.

: ಕೊಂಚ ಕಪ್ಪಾಗಿರಬಹುದು.

: ಕಪ್ಪಾಗಿಲ್ಲ, ಬೆಳ್ಳಗಿದ್ದಾನೆ.

ಒಬ್ಬವ : (ಆತ್ಮವಿಶ್ವಾಸದಿಂದ) ಆ ಮನುಷ್ಯ ಎತ್ತರ-ಗಿಡ್ಡ, ದಪ್ಪ-ಬಡಕಲು, ಕಪ್ಪು-ಬೆಳ್ಳಗೆ ಹೇಗಾದರೂ ಇರಲಿ. ಆದರೆ ಆ ಮನುಷ್ಯ ನಮ್ಮ ನಿಮ್ಮ ಹಾಗಿಲ್ಲ ಅಂತ ಎದೆ ತಟ್ಟಿ ಹೇಳ್ತೀನಿ.

ಅಜ್ಜ: ಹಾಗಿದ್ರೆ ಕೆಲಸ ತುಂಬ ಸುಲಭ. ನಮ್ಮ ನಿಮ್ಮ ಹಾಗೆ ಇಲ್ಲದ ಮನುಷ್ಯನನ್ನು ಹುಡುಕೋದು. ಸ್ವಾಮಿಗಳ ಬಗ್ಗೆ ಅವನೇ ಸರಿಯಾಗಿ ಹೇಳಬಹುದು.

(ಎಲ್ಲರಿಗೂ ಅಜ್ಜನ ಮಾತು ಒಪ್ಪಿಗೆಯಾಗುತ್ತದೆ)

ಒಬ್ಬವ : ಹಾಗಿದ್ರೆ ಇನ್ನು ಕಾಯೋದು ಬೇಡ. ಆತ ಊರು ಬಿಟ್ಟು ಹೋಗಬಹುದು.

(ಎಲ್ಲರೂ ಹುಡುಕತೊಡಗುತ್ತಾರೆ. ಒಂದು ಕಡೆ ಇಲ್ಲೆ ಇದ್ದಾರೆ, ಕೈಗೆ ಸಿಕ್ಕರು ಎಂಬ ಕೂಗು ಕೇಳಿ ಬರುತ್ತದೆ. ಎಲ್ಲರೂ ಅತ್ತಕಡೆ ಓಡಿ ಹೋಗ್ತಾರೆ. ಅಂಕುಶನನ್ನು ಒತ್ತಾಯದಿಂದ ಎತ್ತಿ ತರುತ್ತಾರೆ. ಅವನು ಕೈಕಾಲು ಬಡಿಯುತ್ತಾನೆ. ಎಲ್ಲ ಜನ ಉತ್ಸಾಹದಿಂದ ಅವನನ್ನು ತಂದಿಟ್ಟು ದೂರ ಸರಿದು ನಿಲ್ಲುತ್ತಾರೆ)

: ಅವನೇ ಇವನು.

: ಇವನೇ ಸ್ವಾಮಿಗಳ ಸುದ್ದಿ ತಂದಿರೋದು.

: ಹೇಳು ನಮ್ಮ ಊರಿಗೆ ಯಾವ ಸ್ವಾಮಿ ಬರ್ತಾರೆ ?

: ಹೇಳಿ.

(ಅಂಕುಶ ಈಗ ಬಾಯಿ ತೆರೆಯುತ್ತಾನೆಂದು ಎಲ್ಲ ಕುತೂಹಲದಿಂದ ಅವನ ಮುಖವನ್ನೇ ನೋಡುತ್ತಾರೆ. ಅಂಕುಶ ಎಲ್ಲ ಮುಖವನ್ನೊಮ್ಮೆ ದಿಟ್ಟಿಸಿ ನೋಡುತ್ತಾನೆ)

ಅಂಕುಶ : (ಸಿಟ್ಟಿನಿಂದ ಒಂದು ಬಯ್ಗಳು ಉದುರಿಸುತ್ತಾನೆ) ಮುಂಡೆಗಂಡ್ರಾ ನಿಮ್ಮನ್ನು ನೀವು ಏನೂಂತ ತಿಳ್ಕೊಂಡಿದ್ದೀರಿ ?

(ಅಂಕುಶನ ಈ ಗಡುಸು ಮಾತು ಕೇಳಿ ಎಲ್ಲರೂ ಗಾಬರಿಯಿಂದ ನೋಡುತ್ತಾರೆ.)

ನನ್ನ ಮೈಗೆ ಕೈ ಹಚ್ಚುವ ಧೈರ್ಯ ಹೇಗೆ ಮಾಡಿದ್ರಿ ? ಗಂಟು ಮೂಟೆ ಕಟ್ಟಿದ್ರಿ, ಹೆಗಲಿಗೆ ಹಚ್ಚಿದ್ರಿ ಮತ್ತು ಇಲ್ಲಿ ತಂದು ಕುಟ್ಟಿದ್ರಿ. ನಾನೇನು ನಿಮ್ಮ ಜೀತದಾಳೇ ? ಕೂಲಿಯವನೇ? ಸಾಲಗಾರನೆ ? ಮೈಯಲ್ಲಿ ಸೊಕ್ಕಿದ್ದರೆ ಒಬ್ಬೊಬ್ಬರಾಗಿ ಮುಂದೆ ಬನ್ನಿ.

(ಕಾದಾಡುವ ಸಿದ್ಧತೆಯಲ್ಲಿ ತೋಳೇರಿಸುತ್ತಾನೆ)

ಅಂಕುಶ : ಆಚೆಗೆ ಸರಿಯಿರಿ.

(ಹೋಗುವ ಸಿದ್ಧತೆಯಲ್ಲಿ ಕಾಲು ಹಾಕುತ್ತಾನೆ. ಅವನು ಹೋಗಲು ಜನ ದಾರಿ ಮಾಡಿಕೊಡುತ್ತಾರೆ. ಆದರೆ ಅಂಕುಶ ಆ ದಾರಿಯಲ್ಲಿ ಹೋಗುವುದಿಲ್ಲ. ಜನರ ಕಡೆಗೆ ಹೋಗುತ್ತಾನೆ. ಜನ ದಾರಿ ಬಿಟ್ಟು ಕೊಡುತ್ತಾರೆ. ಆ ಕಡೆಗೂ ಹೋಗುವುದಿಲ್ಲ. ಎಲ್ಲಿ ಎಲ್ಲಿಯೋ ಹೋಗಲು ಪ್ರಯತ್ನಿಸುತ್ತಾನೆ. ಒಬ್ಬ ಮುಂದೆ ಸರಿದು ಕೇಳುತ್ತಾನೆ)

ಒಬ್ಬವ : ನಾವು ಕೇಳಬೇಕೂಂತ ಇದ್ದದ್ದು...

ಅಂಕುಶ : (ತಿರುಗಿ ಅವರ ಮೈಮೇಲೆರಗುತ್ತ) ಏನು ಕೇಳಬೇಕೂಂತ ಇದ್ದೀರಿ?

ಒಬ್ಬವ : ಸ್ವಾಮಿಗಳು ನಮ್ಮೂರಿಗೆ ಬರ್ತಾರೆ ಅಂತ ಸುದ್ದಿ ತಂದವರು ಯಾರು?

ಅಂಕುಶ : ನಾನೇ ತಂದಿದ್ದು...ನಿಮಗೇನು ಹೇಳಬೇಕಾಗಿದೆ.

ಒಬ್ಬವ : ಆ ಸುದ್ದಿ ನಿಜವೆ ?

ಅಂಕುಶ : (ಸಿಟ್ಟು ಇನ್ನೂ ಕಡಮೆಯಾಗಿಲ್ಲ) ಸುಳ್ಳು !

(ಅಜ್ಜ ಮುಂದೆ ಬರುತ್ತಾನೆ)

ಅಜ್ಜ: ಮಗು ಸಿಟ್ಟಾಗಬೇಡ. ಇವರೆಲ್ಲರ ಪರವಾಗಿ ನಾನು ನಿನ್ನ ಕ್ಷಮೆ ಕೇಳ್ತೀನಿ. ನಿನ್ನ ಮೈಮೇಲೆ ಇವರು ಕೈ ಹಾಕಿದ್ದು ಸರಿಯಲ್ಲ. ಅಪರಾಧಕ್ಕೆ ಶಿಕ್ಷೆಯಾಗಲೇಬೇಕು.

(ಅಜ್ಜ ಅಂಕುಶನ ಕಾಲು ಹಿಡಿಯುತ್ತಾನೆ. ಅಂಕುಶ ಕಾಲಿನಿಂದಲೇ ಆತನನ್ನು ಅತ್ತ ತಳ್ಳುತ್ತಾನೆ)

ಅಂಕುಶ : ನೀನೊಬ್ಬ ಮನುಷ್ಯನಾಗಿ ಮತ್ತೊಬ್ಬನ ಕಾಲು ಹಿಡಿತಿಯಾ ? ನಾಚಿಕೆ ಕಾಣೋಲ್ಲವೆ ? ದಡ್ಡಾ !

(ಕೆಲಕ್ಷಣ ಎಲ್ಲರೂ ಮೌನ)

ಅಂಕುಶ : ಸ್ವಾಮಿ ಚೈತನ್ಯಕುಮಾರ ನಿಮ್ಮೂರಿಗೆ ಬರುತ್ತಾರೆ ಅನ್ನೋದು ಸತ್ಯವಾದ ಮಾತು. ನಿನ್ನೆ ರಾತ್ರಿ ನಡೆದ ಪ್ರವಚನದಲ್ಲಿ ತಮ್ಮ ಶಿಷ್ಯರು, ಭಕ್ತರ ಮುಂದೆ ಈ ಆಶಯವನ್ನು ವ್ಯಕ್ತಪಡಿಸಿದ್ದಾರೆ. ನಾನು

ನನ್ನ ಕಣ್ಣಿನಿಂದ ನೋಡಿದ್ದೇನೆ. ಕಿವಿಯಿಂದ ಕೇಳಿದ್ದೇನೆ. ಎಲ್ಲಕ್ಕಿಂತ ಮಹತ್ವದ ಸುದ್ದಿಯೆಂದರೆ ಚೈತನ್ಯಕುಮಾರ ಸ್ವಾಮಿಗಳು ಒಂದು ಸಂಕಲ್ಪ ಮಾಡಿದ್ದಾರೆ. ಅವರು ಮೊಟ್ಟ ಮೊದಲ ಮಠ ಈ ಊರಿನಲ್ಲಿ ಕಟ್ಟ್‌ತಾರಂತೆ. ಈ ಘೋಷಣೆ ಮಾಡುವಾಗ ಅವರ ತುಟಿಗಳು ಕಮಲದ ಪಕಳೆಗಳಂತೆ ಥರಥರಿಸುತ್ತಿದ್ದವು, ಕಣ್ಣುಗಳು ತೇಜಃಪುಂಜ ಮಣಿಗಳಂತೆ ಮಿಂಚುತಿದ್ದವು. ಇಂಥ ದೃಶ್ಯ ನಾನು ಮೊದಲ ಬಾರಿಗೇ ನೊಡಿದ್ದು.

: ನಿನ್ನ ಹೆಸರೇನು ?

ಅಂಕುಶ : ಏಕೆ ? ನನ್ನ ಮಾತಿನಲ್ಲಿ ನಂಬಿಕೆಯಿಲ್ಲವೆ ? ನಂಬಬೇಡಿ. ನಂಬಬೇಡಿ. ಬರೋ ಸ್ವಾಮಿಗಳು ಬಂದೇ ಬರ್‌ತಾರೆ. ಸಂಕಲ್ಪದಂತೆ ಮಠ ಕಟ್ಟಿಸಿ ಹೋಗುತ್ತಾರೆ.

: ವಿಶ್ವಾಸ ಮತ್ತು ಅವಿಶ್ವಾಸಕ್ಕಾಗಿಯಲ್ಲ. ನೀವು ನಮ್ಮೂರಿಗೆ ಒಳ್ಳೆ ಸುದ್ದೀನೇ ತಂದಿದ್ರಿ. ನಿಮ್ಮ ಹೆಸರು ಗೊತ್ತಾದ್ರೆ ಚೆನ್ನಾಗಿರುತ್ತೆ.

. ಅಂಕುಶ : ಯಾಕೆ ನನ್ನ ಜಯಘೋಷ ಮಾಡೋದಕ್ಕೆ ? ನನ್ನ ಹೆಸರು ಅಂಥ ಮಹತ್ವದ್ದೇನಲ್ಲ, ಅಂಕುಶ.

: (ಔಪಚಾರಿಕವಾಗಿ) ಅಂಕುಶ ! ತುಂಬ ಚೆನ್ನಾಗಿದೆ ಹೆಸರು.

: ಆದರೆ ಸ್ವಾಮಿ ಚೈತನ್ಯಕುಮಾರರು ನಮ್ಮೂರಿಗೆ ಏಕೆ ಬರ್ತಾರೆ ?

ಅಂಕುಶ : ಆದನ್ನು ನೀವು ಅವರ ಶಿಷ್ಯರಿಗೆ, ಅಥವಾ ಭಕ್ತಾದಿಗಳಿಗೆ ಕೇಳಿ. ನಿಮ್ಮಲ್ಲಿ ದಮ್ಮಿದ್ರೆ ಸ್ವಾಮಿಗಳನ್ನೇ ಕೇಳಿ ತಿಳ್ಕೋಬಹುದು.

: ಅಂದರೆ ನೀನು ಸ್ವಾಮಿಗಳ ಭಕ್ತ...

ಅಂಕುಶ : ಅಲ್ಲ. ನಾನು ಸ್ವಾಮಿಗಳ ಭಕ್ತನೂ ಅಲ್ಲ, ಶಿಷ್ಯನೂ ಅಲ್ಲ. ಅವರ ಚಟುವಟಿಕೆಗಳನ್ನು ದೂರದಿಂದ ನೋಡುವವರಲ್ಲಿ ಒಬ್ಬ. ಸ್ವಾಮಿಗಳನ್ನು ತುಂಬ ದೂರದಿಂದ ನೋಡ್ತೀನಿ ಅದರಿಂದಲೇ ಅವರನ್ನು ಚೆನ್ನಾಗಿ ತಿಳ್ಕೊಂಡಿದ್ದೀನಿ. ನನ್ನ ಬಗ್ಗೆ ನನ್ನ ಹೆಸರಿನ ಬಗ್ಗೆ ತಲೆ ಕೆಡಿಸಿಕೊಳ್ಳೋದಕ್ಕಿಂತ ಹೆಚ್ಚು ನೀವು ಸ್ವಾಮಿಗಳ ಬಗ್ಗೆ ಯೋಚಿಸೋದು ಒಳ್ಳೆಯದೆಂದು ನನಗನ್ನಿಸುತ್ತೆ.

: ನಾವು ಅದನ್ನೇ ಯೋಚಿಸ್ತಾ ಇದ್ದೀವಿ. ಅದಕ್ಕೆ ಕೇಳಿದ್ದು ಸ್ವಾಮಿಗಳು ಇಲ್ಲಿ ಯಾಕೆ ಬರ್ತಿದ್ದಾರೇ ಅಂತ.

ಅಂಕುಶ : ನನ್ನ ಅಂದಾಜು...ಚೈತನ್ಯಕುಮಾರ ಸ್ವಾಮಿಗಳು ನಿಮ್ಮೂರಿಗೆ ಬರೋ ಕಾರಣ...ಬೆಟ್ಟದ ಮೇಲೆ ಮಳೆ ಯಾಕೆ ಬೀಳತ್ತೆ. ಕತ್ತಲೆಯಲ್ಲಿ ಮಿಂಚುಹುಳಗಳು ಏಕೆ ಮಿಂಚುತ್ತವೆ. ಇದಕ್ಕೆಲ್ಲ ಉತ್ತರ ಸಿಕ್ಕರೆ ನಿಮ್ಮ ಪ್ರಶ್ನೆಗೂ ಉತ್ತರ ಸಿಗ್‌ಬಹುದು.

: (ಉತ್ಸಾಹದಿಂದ) ನನ್ನ ಅಂದಾಜೇ ನಿಜವಾಯ್ತು. ಸ್ವಾಮಿ ಚೈತನ್ಯ ಕುಮಾರರು ನಮ್ಮ ಕಲ್ಯಾಣಕ್ಕಾಗಿ ನಮ್ಮೂರಿಗೆ ಬರ್ತಿದ್ದಾರೆ.

: ಹಾಗಿದ್ರೆ ಒಳ್ಳೆಯದಾಯ್ತು....ಇನ್ನು ಮುಂದೆ ಯಾವ ಕೆಲಸ-ಕಾರ್ಯ ಮಾಡ್‌ಬೇಕಾಗಿಲ್ಲ.

: ದಿನದ ದುಡಿಮೆ ನೋಡೋದೂ ಬೇಡ.

: ರೋಗ ರುಜಿನಗಳಾಗೋಲ್ಲ. ಔಷಧೋಪಚಾರಕ್ಕೆ ದುಡ್ಡು ಖರ್ಚಾಗೋಲ್ಲ.

: ಹಗಲು-ರಾತ್ರಿ ಸ್ವಾಮಿಗಳ ಭಕ್ತರಾಗಿರೋದು.

: ಮಠ ತಯಾರಾದ ಮೇಲಂತೂ ಕೇಳೋದೇ ಬೇಡ. ಮಠದ ಸುತ್ತಲೂ ಕಾಗೆಗಳಂತೆ ಸುತ್ತೋದು.

(ಎಲ್ಲರೂ ಉತ್ಸಾಹದಿಂದ ಉಬ್ಬಿ ಹೋಗಿದ್ದಾರೆ. ಅಂಕುಶ ಹೊರಡಲು ಅಸುವಾಗುತ್ತಾನೆ. ಎಲ್ಲರೂ ಅವನನ್ನು ತಡೆಯುತ್ತಾರೆ.)

: ಅರೆ ಅಂಕುಶ !

ಅಂಕುಶ : ಹುಶಾರ್...ನನ್ನ ಮೈ ಮುಟ್ಟಬೇಡಿ.

: ನಾವು ನಿಮಗೆ ವಿನಂತಿ ಮಾಡ್ತಾ ಇದ್ದೀವಿ.

ಅಂಕುಶ : ವಿನಂತಿ ಏನು ?

: ಇಷ್ಟು ದೊಡ್ಡ ಸ್ವಾಮಿಗಳು ನಮ್ಮಲ್ಲಿಗೆ ಬರ್ತಾ ಇದ್ದಾರೆ. ನಮಗಂತೂ ಅವರ ಬಗ್ಗೆ ಏನೇನೂ ಗೊತ್ತಿಲ್ಲ. ನೀವು ನಮಗೆ ಕೊಂಚ ಸಹಾಯ ಮಾಡಬಹುದು. ನೀವು ನಮಗೆ ಸಹಾಯ ಮಾಡಬೇಕು ಅಂತ ನಾವು ನಿಮ್ಮಲ್ಲಿ ಕೇಳಿಕೊಳ್ತಾ ಇದ್ದೀವಿ.

ಅಂಕುಶ : ಏನ್ ಸಹಾಯ...ಚಂದಾ ಕೊಡಲೆ ?

: ಬೇಡ...ಅದನ್ನು ನಾವು ನೋಡ್ಕೋತೀವಿ.

ಅಂಕುಶ : ಹಾಗಾರೆ ಮತ್ತೇನು ?

: ನೀವು ನಮ್ಮೊಂದಿಗೆ ಇರಿ. ಸ್ವಾಮಿಗಳ ಸ್ವಾಗತ ಕಾರ್ಯದಲ್ಲಿ ನಮಗೆ ಸ್ವಲ್ಪ ಸಹಾಯ ಮಾಡಿ.

ಅಂಕುಶ : ನಾನೇನು ತೋರಣ ಕಟ್ಟಲೆ ?

: ಬೇಡ, ನೀವೇನು ಮಾಡಬೇಡಿ. ನಾವೇನು ಮಾಡಬೇಕು. ಏನು ಮಾಡಬಾರದು ಅಂತ ಹೇಳ್ತಾ ಇರಿ. ಇಂಥ ಕೆಲಸಗಳು ನಮಗೆ ತೀರ ಹೊಸತು. ನಮಗಂತೂ ಏನೇನೂ ಗೊತ್ತಿಲ್ಲ. ನೀವಾದರೂ ಸ್ವಾಮಿಗಳನ್ನು ಹತ್ತಿರದಿಂದ ಬಲ್ಲವರು.

ಅಂಕುಶ : ಇಲ್ಲ, ದೂರದಿಂದ ಬಲ್ಲೆ.

: ಇರಲಿ ಬಿಡಿ. ಒಟ್ಟಿನಲ್ಲಿ ಬಲ್ಲವರು ತಾನೆ ?

ಅಂಕುಶ : ನಿಮ್ಮ ವಿಚಾರ ನನಗೆ ಗೊತ್ತಾಯ್ತು. ಆದರೆ ನಾನು ನಿಮಗೆ ಭಾರವಾಗಬಹುದು ?

: ಅಂದರೆ ?

ಅಂಕುಶ : ಭಾರವಾಗಬಹುದು ಅಂದ್ರೆ ದುಡ್ಡಿನಿಂದಲ್ಲ. ನೀವು ನನಗೊಂದು ಬಿಡಿಗಾಸೂ ಕೊಡಬೇಕಾಗಿಲ್ಲ. ಆದರೆ ನನ್ನ ಸ್ವಭಾವ ನಿಮಗೆ ಒಪ್ಪಿಗೆಯಾಗಲಿಕ್ಕಿಲ್ಲ. ನಾನು ಕೊಂಚ ಕೋಪಿಷ್ಠ. ಏನಾದ್ರೂ ಅಂದ್ರೆ ಕೋಪ ಬಂದ್‌ಬಿಡುತ್ತೆ.

: ನಮ್ಮದೂ ಅಷ್ಟೆ. ನೀವೊಂದು ಬಯ್ದರೆ ನಾವೂ ಒಂದ್ ಬಯ್ದು ಬಿಡ್ತೀವಿ. ಲೆಕ್ಕಾಚಾರ ಚುಕ್ತಾ.

ಅಂಕುಶ : ನಾನು ಅಷ್ಟಕ್ಕೆ ನಿಲ್ಲೋದಿಲ್ಲ. ಮೊದಲು ಬಯ್ಗುಳು ಬೀಳ್ತವೆ. ಆಮೇಲೆ ತಿರುಗಿ ನೋಡಿ ಯಾರು, ಯಾಕೆ ಅಂತ ಪರಾಂಬರಿಸಿ ನೋಡೊ ಸ್ವಭಾವ. ನೀವು ನಿಮ್ಮ ಮಾನ-ಸನ್ಮಾನದ ಬಗ್ಗೆ ಯೋಚನೆ ಮಾಡಿ.

ಅಜ್ಜ: (ಅಂಕುಶನನ್ನು ಒಂದು ಕಡೆಗೊಯ್ದು) ಹಾಗೆ ನೋಡಿದ್ರೆ ನಮಗೆ ಮಾನ-ಸನ್ಮಾನದ ಪರಿವೇನೇ ಇಲ್ಲ.

ಅಂಕುಶ : (ಎಲ್ಲರಿಗೂ) ನಾನು ಒಂದಕ್ಕೆರಡು ಕೊಟ್ರೆ ನೀವು ಸುಮ್ಮನಾಗಿ ಬಿಡಬಹುದು. ಆದರೆ ನಾನು ಸುಮ್ಮನಾಗ್ತೀನಿ ಅಂತ ಹೇಳೋಕ್ಕೆ ಬರೋದಿಲ್ಲ.

: ಆಗಲಿ...ಚಿಂತೆಯಿಲ್ಲ. ನಮಗೆ ಒಪ್ಪಿಗೆಯಿದೆ.

ಅಂಕುಶ : ಸರಿ...ಹಾಗಿದ್ರೆ ಪರವಾಯಿಲ್ಲ. ನಿಮ್ಮ ವಿನಂತಿಯನ್ನು ಮನ್ನಿಸಿ ನಾನಿಲ್ಲಿರ್ತೀನಿ. (ಕುಳಿತುಕೊಳ್ಳುತ್ತಾನೆ...ತಕ್ಷಣ ಎದ್ದು ನಿಲ್ಲುತ್ತಾನೆ) ಆದರೆ ಒಂದ್ ಮಾತು. ಸ್ವಾಮಿ ಚೈತನ್ಯಕುಮಾರರು ಬರೋವರೆಗೆ ಮಾತ್ರ ಇರ್ತೀನಿ. ಆಮೇಲೆ ಒಂದು ಕ್ಷಣಾನೂ ನಿಲ್ಲೋದಿಲ್ಲ.

ಜನ : ನಮಗೆ ಒಪ್ಪಿಗೆಯಿದೆ. ನಮಗೆ ಒಪ್ಪಿಗೆಯಿದೆ.

ಒಬ್ಬವ : ಆಮೇಲೆ ನಮಗೆ ನಿಮ್ಮ ಅಗತ್ಯವಿಲ್ಲ.

(ಎಲ್ಲರೂ ಅವನು ಕುಳಿತುಕೊಳ್ಳುವಂತೆ ಮಾಡುತ್ತಾರೆ. ಎಲ್ಲರೂ ಸುತ್ತುವರಿದು ನಿಲ್ಲುತ್ತಾರೆ)

ಒಬ್ಬವ : ಹೇಳಿ...ನಮಗೆ ಸ್ವಾಮಿ ಚೈತನ್ಯಕುಮಾರರ ಬಗ್ಗೆ.

(ಎಲ್ಲರೂ ಕುತೂಹಲದಿಂದ ಅವನ ಮುಖವನ್ನೇ ನೋಡುತ್ತಿದ್ದಾರೆ)

ಅಂಕುಶ : (ಅವರೆಲ್ಲರ ಮೇಲೆ ಕಣ್ಣಾಡಿಸುತ್ತ) ನಾಲ್ಕು ಗಂಡಂದಿರನ್ನು ಇಟ್ಟುಗೊಂಡ ಹೆಣ್ಣಿನ ಕಥೆ ಕೇಳಲು ಉತ್ಸುಕರಾಗಿದ್ದಂತೆ ಮುಖ ಮಾಡಿ ಕೂತಿದ್ದೀರಿ. ಸ್ವಾಮಿ ಚೈತನ್ಯ ಕುಮಾರರು ಇತರ ಸ್ವಾಮಿಗಳಂತಲ್ಲ.

(ಒಮ್ಮೆಲೆ ಅಂಕುಶನಿಗೆ ಹಿಂದಿನ ಘಟನೆ ನೆನಪಾಗುತ್ತದೆ. ತಕ್ಷಣ ಎದ್ದು ನಿಲ್ಲುತ್ತಾನೆ.)

ಆಗ ನನ್ನ ಮೇಲೆ ಎಲ್ಲಕ್ಕೂ ಮೊದಲು ಕೈ ಮಾಡಿದವರು ಯಾರು? ಕತ್ತಿಗೆ ಕೈ ಹಾಕಿ ಯಾರು ನನ್ನ ಎತ್ತಿ ಹಿಡಿದರು.

(ಒಬ್ಬ ಮುಗ್ಧತನದಿಂದ 'ನಾನೇ' ಎಂದು ಹೇಳಲು ಮುಂದಾಗುತ್ತಾನೆ. ಮಿಕ್ಕವರು ಅವನನ್ನು ಹಿಂದೆಯೇ ದಬ್ಬಿ ಹಿಡಿಯುತ್ತಾರೆ. ಅಂಕುಶ ತಾನಾಗಿಯೇ ತಣ್ಣಗಾಗುತ್ತಾನೆ.)

ನೀವು ನನ್ನ ಬಳಿ ಹೀಗೆ ಹದ್ದುಗಳಂತೆ ಕೂತಿರ್ತೀರಾ ? ಸ್ವಾಮಿಗಳು ಬರೋಕ್ಕೆ ಇನ್ನು ಎಷ್ಟೋ ದಿನಗಳಿವೆ.

: ಅದು ಒಳ್ಳೆದಾಯ್ತು ಗಡಿಬಿಡಿಯಿಲ್ಲ.

: ಸ್ವಾಮಿ ಯಾವಾಗ ಬರ್‌ತಾರೆ ?

: ಹೇಗೆ ಬರ್‌ತಾರೆ ?

(ಅಂಕುಶ ಮೇಲೆ ಬೆರಳು ತೋರಿಸುತ್ತಾನೆ)

ಅಂಕುಶ : (ರೇಗಿ) ನಾನು ಪ್ರಶ್ನೆಗಳಿಗೆ ಉತ್ತರ ಕೊಡಲು ನಾನೇನು ನಿಮ್ಮ ಸಂಬಳದ ನೌಕರನಲ್ಲ. ಗೊತ್ತಾಯ್ತ ? ಅವರು ಬರುವ ಮುಂಚಿನ ದಿನ ನಿಮಗೆ ಹೇಳ್ತೇನೆ.

: ಅಷ್ಟಾದರೆ ಸಾಕು.

ಅಂಕುಶ : ಅವರು ನಾಳೇನೆ ಬರ್‌ತಾರೆ ಅಂತ ತಿಳಕೊಂಡು ನಡೀರಿ.

: ಮತ್ತೆ ಸ್ವಾಮಿಗಳು ನಾಳೇನೆ ಬಂದ್‌ಬಿಟ್ರೆ ?

ಅಂಕುಶ : ಬಂದ್ರೆ ಏನು ? ಊರಲ್ಲಿ ಕಾಲಿಟ್ಟ ಕೂಡಲೇ ಎರಡೂ ಕೈಗಳ ಬೊಗಸೆ ಮಾಡಿ ಬಗ್ಗಿ ಒಂದು ಗುಟುಕು ನೀರು ಕೊಡಿ ಅನ್ನಬಹುದು.

ಅಂಕುಶ : ಸ್ವಾಮಿಗಳು ಊರಲ್ಲಿ ಕಾಲಿಟ್ಟಾಕ್ಷಣ ಮೊದಲು ಕೇಳೋದೆ ನೀರು! ಒಂದು ಗುಟುಕು ನೀರು ಕುಡಿದು ಸ್ವಾಮಿಗಳು ತೃಪ್ತರಾಗಬಹುದು. ಆಗ ಎಲ್ಲ ಭಕ್ತರ ಹೊಟ್ಟೆ ನೀರು ಕುಡಿದಂತೆ ಊದಿಕೊಳ್ಳುತ್ತದೆ.

: ಆಗ ?

ಅಂಕುಶ : ಆಗ ಏನು ? ನೀರು ಕುಡಿದ ಎಲ್ಲ ಭಕ್ತರ ಗತಿಯಾಗುವಂತೆ ಎಲ್ಲರ ಗತಿಯೂ ಆಗುತ್ತದೆ.

: ಚಮತ್ಕಾರ.

ಅಂಕುಶ : ಮೊದಲಿನದು ಚಮತ್ಕಾರ. ಎರಡನೇದು ನೈಸರ್ಗಿಕ.

: ನಮಗಂತೂ ಎಲ್ಲಾನೂ ಚಮತ್ಕಾರ.

ಅಂಕುಶ : ಸ್ವಾಮಿಗಳಿಗಾಗಿ ಒಂದು ಗುಟುಕು ನೀರು ಸಿಗಬಹುದಲ್ಲವೆ ?

: ಇಲ್ಲದೆ ಇರೋದಕ್ಕೇನಾಗಿದೆ ?

ಅಂಕುಶ : ಸ್ವಾಮಿಗಳು ಯಾವ ಊರಿಗೆ ಬರ್‌ತಾರೋ ಅದೇ ಊರಿನ ನೀರು ಕುಡೀತಾರೆ.

: ಅಂದ್ರೆ ?

ಅಂಕುಶ : ಅಂದರೆ ಒಂದು ಊರಲ್ಲಿ ನಿಂತು ಇನ್ನೊಂದೂರಿನ ನೀರು ಕುಡಿಯೋದಿಲ್ಲ. ಈ ಊರಲ್ಲಿ ಇದ್ದು ಇದೇ ಊರಿನ ನೀರು ಕುಡಿಯುತ್ತಾರೆ.

(ಎಲ್ಲರ ಮುಖಗಳು ಚಿಂತಾಗ್ರಸ್ತವಾಗುತ್ತದೆ.)

ಅಂಕುಶ : ನೀವೆಲ್ಲ ಹೀಗೇಕೆ ಚಿಂತಾಗ್ರಸ್ತರಾದಿರಿ. ನಿಮ್ಮ ಬಾವಿಗೆ ನೀರಿಲ್ಲವೆ ?

ಅಜ್ಜ : ನಮ್ಮ ಹಿರಿಯರ ಹೇಳಿಕೆಯಂತೆ ನಮ್ಮ ಊರಿನಲ್ಲಿ ಬಾವಿ ತೋಡೋಕ್ಕೆ ಬರೋಲ್ಲ.

ಅಂಕುಶ : ಯಾಕೆ ?

ಅಜ್ಜ : ಅದೊಂದು ಆಖ್ಯಾಯಿಕೆ ಇದೆ. ಮೊದಲು ನಮ್ಮೂರಿನಲ್ಲಿ ಒಂದೇ ಬಾವಿ ಇತ್ತಂತೆ. ಊರಿನಲ್ಲಿದ್ದ ಸೊಸೆಯಂದಿರು ತೊಂದರೆಗೆ ಬೇಸತ್ತು ಬಾವಿಯಲ್ಲಿ ಜೀವ ಕೊಡೋಕ್ಕೆ ಶುರು ಮಾಡಿದ್ರು. ಅದಕ್ಕೆ ಎಲ್ಲರೂ ಸೇರಿ ಆ ಬಾವಿಯನ್ನು ಮುಚ್ಚಿ ಹಾಕಿದ್ರಂತೆ. ಹೊಸ ಬಾವಿ ತೊಡಿಸೋದಿಲ್ಲಾಂತ ನಿರ್ಧಾರ ಮಾಡಿದ್ರಂತೆ.

ಅಂಕುಶ : ಬಾವಿ ಮುಚ್ಚೋ ಬದಲು ಹೆಣ್ಣು ಮಕ್ಕಳಿಗಾಗುವ ತೊಂದ್ರೆ ಕಡಮೆ ಮಾಡಬಹುದಿತ್ತಲ್ಲ.

ಅಜ್ಜ : ಯಾವುದು ಸಾಧ್ಯವಿತ್ತೊ ಅದನ್ನು ನಮ್ಮ ಹಿರಿಯರು ಮಾಡಿದರು.

ಅಂಕುಶ : ಹಾಗಿದ್ರೆ ನಿಮ್ಮೂರಿನ ನೀರಿನ ಸಮಸ್ಯೆ ಹೇಗೆ ಬಗೆಹರಿಯುತ್ತೆ ? ಬೆಳಗ್ಗಿನ ನಿತ್ಯಕರ್ಮಗಳನ್ನು ಹೇಗೆ ನಿಭಾಯಿಸ್ತೀರಿ ? ಹುಲ್ಲು ಉಪಯೋಗಿಸ್ತೀರೊ ಗಿಡಗಳ ಎಲೆನೊ ?ಸ್ನಾನ ಹೇಗೆ ಮಾಡ್ತೀರಿ? ಎಂಟು ದಿನಕೊಮ್ಮೆಯೋ ಹದಿನೈದು ದಿನಕ್ಕೊಮ್ಮೆಯೊ ? ಸ್ನಾನ, ಮಾಡದೇ ಇರೋದಕ್ಕೂ ಹಿರಿಯರ ಒಂದು ಆಖ್ಯಾಯಕೆ ಇರಬಹುದು ?

: ಹಾಗೆ ಮೈಕೈ ತೊಳೆದುಕೊಳ್ಳುವ ಕೆಲಸ ಊರಿನ ಹೊಳೆಯ ಹೊಂಡದಲ್ಲಿ ನಡೆಯುತ್ತೆ.

ಅಂಕುಶ : ಊರಿನ ಮನೆಗಳಲ್ಲಿ ಅಡಿಗೆ ಮಾಡ್ತೀರೋ ಇಲ್ಲೊ ? ಅದಕ್ಕೆ ನೀರು ಎಲ್ಲಿಂದ ತರ್ತೀರಿ ?

: ಅರೆ ಹೌದಲ್ಲ. ಅದಕ್ಕೆ ನೀರೆಲ್ಲಿಂದ ತರ್ತಾರೂ ಏನೊ.

ಅಜ್ಜ: ಹೇಳಬೇಕೆಂದರೆ ಮನೆಯ ಎಲ್ಲಾ ಕೆಲಸಾನೂ ಹೆಣ್ಣುಮಕ್ಕಳೇ ಮಾಡೋದರಿಂದ ಅವರು ಎಲ್ಲಿಂದಲೊ ನೀರು ತರ್‌ತಾರೆ. ಎಲ್ಲಿಂದಲೋ ತರ್‌ತಾರೆ ಅಂದ್ರೆ ಎಲ್ಲಾದರೂ ನೀರು ಇರಲೇ ಬೇಕು. ಎಲ್ಲಿಯಾದರೂ ಅಂದ್ರೆ ಝರಿಗೆ, ಹೊಳೆಯಿಂದ ತರ್‌ತಿರ್‌ಬೇಕು. (ಗಲಿಬಿಲಿಗೊಳ್ಳುತ್ತಾನೆ. ಇತರರಿಗೆ ಚುಚ್ಚುತ್ತಾನೆ) ಮುಖ ಮೇಲೆ ಮಾಡಿ ಏನ್ ನೋಡ್ತಿದ್ದೀರಿ. ಹೋಗಿ ಹೆಣ್ಣು ಮಕ್ಕಳನ್ನು ಕರ್‌ಕೊಂಡು ಬನ್ನಿ, ನೀರು ಎಲ್ಲಿಂದ ತರ್ತಾರೆನ್ನೋದು ಗೊತ್ತಾಗಬೇಕು.

(ನಾಲ್ಕು-ಐದು ಜನ ಓಡುತ್ತ ಹೋಗುತ್ತಾರೆ)

ಅಜ್ಜ: (ಅಂಕುಶನಿಗೆ) ಕೊಂಚ ನಿಲ್ಲಿ. ನೀರಿನ ಸೋಕ್ಷ - ಪೋಕ್ಷ ಈಗಲೇ ಗೊತ್ತಾಗಿ ಬಿಡುತ್ತೆ. (ಸ್ವಗತ) ಅಡಿಗೆ ನೀರು ಬಳಸುತ್ತಾರೆ. ನೀರು ಎಲ್ಲಿಂದ ತರ್ತಾರೆ ಅಂತ ಗೊತ್ತಿಲ್ಲ ಅಂದ್ರೆ ಹೇಗೆ ?

(ಆಗ ಓಡಿ ಹೋದ ನಾಲ್ಕೈದು ಜನ ಐದಾರು ಹೆಣ್ಣು ಮಕ್ಕಳನ್ನು ದನಗಳನ್ನು ಓಡಿಸಿಕೊಂಡು ಬರುವ ಹಾಗೆ ಬರುತ್ತಾರೆ. ಹೆಣ್ಣು ಮಕ್ಕಳು ಗಾಬರಿಯಿಂದ ಬಂದು ನಿಂತುಕೊಳ್ಳುತ್ತಾರೆ. ಅಜ್ಜ ಅವರನ್ನು ದಬಾಯಿಸಿ ಕೇಳುತ್ತಾನೆ)

ಅಜ್ಜ: ನೀವು ಎಲ್ಲಿಂದ ನೀರು ತರ್‌ತೀರಿ ? ನಮಗದು ಗೊತ್ತಾಗಬೇಕು.

(ಹೆಣ್ಣು ಮಕ್ಕಳು ಒಬ್ಬರಿಗೊಬ್ಬರು ಪಿಳಿಪಿಳಿ ಕಣ್ಣು ಬಿಟ್ಟು ನೋಡುತ್ತಾರೆ. ಒಬ್ಬಳು ಧೈರ್ಯವಾಗಿ ಮಾತನಾಡುತ್ತಾಳೆ)

ಹೆಣ್ಣು: ಅಜ್ಜಯ್ಯ, ನಿಮಗೆ ಬೇರೆ ಹೇಳಬೇಕೆ ? ನಾವೆಲ್ಲಿಂದ ನೀರು ತರೋದು. ನಾವು ಕಣ್ಣಿಂದಲೇ ನೀರು ತರ್‌ತೀವಿ.

(ಎಲ್ಲ ಗಂಡಸರು ಹೆಂಗಸರ ಮೈಮೇಲೆ ಏರಿ ಹೋಗುತ್ತಾರೆ. ಹೆಣ್ಣು ಮಕ್ಕಳು ಅಂಜಿ ಅಲ್ಲಿಂದ ಸರಿದು ಬಂದ ದಾರಿಯಲ್ಲಿ ಓಡ ತೊಡಗುತ್ತಾರೆ)

ಅಂಕುಶ : (ಕೂಗಿಕೊಳ್ಳುತ್ತ) ಹೆಣ್ಣುಮಕ್ಕಳ ಕಣ್ಣುಗಳಲ್ಲಿ ನೀರು ತರಿಸಿ ಅದರ ಮೇಲೆ ಬದುಕುವ ಗಂಡು ಮಹಾಶಯರೇ ನಾನು ಹೇಳ್ತಿರೋದು ಚೆನ್ನಾಗಿ ಕೇಳಿ. ಸ್ವಾಮಿ ಚೈತನ್ಯಕುಮಾರರು ನಿಮ್ಮ ಮುಂದೆ ಬೊಗಸೆ ಒಡ್ಡಿ ನೀರು ಕೇಳಿದಾಗ ನೀವು ನಿಮ್ಮೂರಿನ ಬಾವಿಯ ಒಂದು ತೊಟ್ಟು ನೀರೂ ಅವರ ಬೊಗಸೆಯಲ್ಲಿ ಹಾಕದಿದ್ದರೆ ಅದೇ ಕೈಗಳಿಂದ ನಿಮಗೆ ಶಾಪ ಕೊಡದೆ ಇರುವುದಿಲ್ಲ. ಸ್ವಾಮಿ ಚೈತನ್ಯ ಕುಮಾರ ಅಂದ್ರೆ ಜಮದಗ್ನಿಯ ಅವತಾರ ಅಂತ ತಿಳೀತಾರೆ.

(ಜನ ಅಂಜಿ ಕಂಗಾಲಾಗುತ್ತಾರೆ)

: ಮುಂದೇನು ಮಾಡೋದು ?

ಅಂಕುಶ : ಬಾವಿ ತೊಡೋದು.

ಅಜ್ಜ: ಆದರೆ ಊರಿನ ಸೊಸೆಗಳ ಗತಿಯೇನು ?

ಅಂಕುಶ : ಅವರ ಕಾಳಜಿ ಊರಿನ ಅತ್ತೆಯರು ನೋಡಿಕೊಳ್ತಾರೆ.

ಹುಡುಗ : ಬಾವಿ ತೊಡೋದು ಅಂದ್ರೆ ತುಂಬ ಕಷ್ಟದ ಕೆಲಸ ಅಲ್ವೆ ?

ಅಂಕುಶ : ನಿನ್ನ ಬಾಯಿಯಿಂದ ಪೂರ್ವಜ ಮಾತಾಡಿದ. ತುಂಬ ಕಷ್ಟ ಪಡಬೇಕೇನೋ ನಿಜ. ಆದರೆ ಸ್ವಾಮಿಗಳ ಶಾಪಕ್ಕೆ ಎರವಾಗೋ ಬದಲು ಇದು ಒಳ್ಳೆಯದು.

: ಬಾವಿ ತೊಡೋದಾದ್ರೆ ಚಿಕ್ಕ ಬಾವೀನೇ ಸಾಕು ಸ್ವಾಮಿಗಳ ಮಟ್ಟಿಗಾದ್ರೆ ಸಾಕು. ಸ್ವಾಮಿಗಳಿಗೆ ನೀರು ಪೂರೈಸಿದರೆ ಸಾಕು. ನಮಗೆ ಹೇಗಿದ್ದರೂ ಇದೆ, ಹೊಳೆ-ಹೊಂಡ.

ಅಂಕುಶ : ಸ್ವಾಮಿಗಳಿಗೆ ಒಂದು ಬಾವಿಯ ನೀರು ಸಾಕಾಗುತ್ತದೆಯೆ ? ನಮ್ಮ ಗಳಿಗೆ-ಕ್ಷಣಗಳು ದೇವರ ಗಳಿಗೆ ಕ್ಷಣಗಳು ಒಂದಲ್ಲ - ಅಂತಾರೆ. ಹಾಗೆ, ಸ್ವಾಮಿಗಳ ಒಂದು ಗುಟುಕಿಗೂ ನಾವೆಲ್ಲ ತೆಗೆದುಕೊಳ್ಳೋ ಒಂದು ಗುಟುಕಿಗೂ ಎಷ್ಟೋ ವ್ಯತ್ಯಾಸವಿರುತ್ತೆ.

ಅಜ್ಜ: ಹಾಗಿದ್ದರೆ ನಾವು ಒಂದು ಬಾವಿಯ ಬದಲು ಒಂದು ಕೆರೆನೇ ತೋಡಿದರೆ ಹೇಗೆ ? ಬಾವಿ ತೋಡಬಾರದು ಅಂತ ನಮ್ಮ ಹಿರಿಯರು ಹೇಳಿದ ಮಾತನ್ನೂ ನಾವು ಉಳಿಸಿಕೊಂಡಂತಾ ಗುತ್ತದೆ.

ಅಂಕುಶ : ಚೆನ್ನಾಗಿದೆ ಕಲ್ಪನೆ.

: ದೊಡ್ಡ ಕೆರೆ ಅಂದರೆ ತುಂಬ ಕಷ್ಟ ಪಡಬೇಕಾಗುತ್ತದಲ್ಲ.

(ಎಲ್ಲ ಜನ ಕಷ್ಟಕ್ಕಾಗಿ ಹಿಂದೆ ಮುಂದೆ ನೋಡತೊಡಗುತ್ತಾರೆ)

ಅಂಕುಶ : ಸೈನಿಕರು ಗುಂಡೇಟಿಗೆ ಅಂಜುತ್ತಾರೆಯೆ ? ನೀವು ಶ್ರಮಜೀವಿ ಗಳಾಗಿ ಕಷ್ಟ ಪಡೋದಕ್ಕೆ ಹಿಂದೆ ಮುಂದೆ ನೋಡೋದೆ ? ನೀವು ನಿಮ್ಮ ತಾಯಿ ಬಗ್ಗೆ ಯೋಚ್ನೆ ಮಾಡಿ. ಅವಳೂ ತನಗಾಗುವ ಹೆರಿಗೆಯ ಕಷ್ಟವನ್ನು ಯೋಜಿಸಿ ನಿಮ್ಮನ್ನು ಹೊಟ್ಟೆಯಲ್ಲಿಯೇ ಕರಗಿಸಿ ಬಿಟ್ಟಿದ್ದರೆ ಏನಾಗುತ್ತಿತ್ತು ?

ಅಜ್ಜ: ನಾನಂತೂ ಕಷ್ಟಪಡೋಕ್ಕೆ ಸಿದ್ಧವಾಗಿದ್ದೀನಿ. ಆದರೆ ನನ್ನ ಶರೀರ ನನಗೆಷ್ಟು ಸಹಕಾರ ಕೊಡುತ್ತೊ ಗೊತ್ತಿಲ್ಲ.

ಅಂಕುಶ : ಶರೀರದ ಮಾತು ಇರಲಿ. ನಿನ್ನ ಮನಸ್ಸು ಕೊಡು.

ಅಜ್ಜ: (ಖುಷಿಯಿಂದ) ಅಗತ್ಯವಾಗಿ.

ಜನ : ನಮ್ಮ ಮನಸ್ಸುಗಳನ್ನೂ ಕೊಟ್ಟುಬಿಡ್ತೇವೆ.
ಅಂಕುಶ : ಕೇವಲ ಮನಸ್ಸುಗಳಲ್ಲ. ಮನಸ್ಸಿನ ಜೊತೆಗೆ ದೇಹವೂ.
ಜನ : ಆಗಲಿ ಕೊಡ್ತೇವೆ.
: ಮತ್ತೇನು ಬೇಕು ಹೇಳಿ.
ಅಂಕುಶ : ಕೆರೆ ತೋಡೋದು ಅಂದ್ರೆ ಅದಕ್ಕೆ ಬೇಕಾಗುವ ಹಾರೆ, ಗುದ್ದಲಿ, ಪಿಕಾಸು, ಬುಟ್ಟಿ, ಕುಡಗೋಲು...
: ಎಲ್ಲಾನೂ ಇದೆ. ಆದರೆ ಉಪಯೋಗಿಸದೇ ಇರೋದ್ರಿಂದ ತುಕ್ಕು ತಿಂದಿದೆ.
: ಆಯುಧಗಳು ಕೆಲಸಕ್ಕೆ ಹತ್ತಿದರೆ ಸಾಕು. ಅವುಗಳಿಗೆ ಹೊಳಪು ಬರುತ್ತದೆ.
: ಹೇಳಿ ಇನ್ನೇನು ಬೇಕೂಂತ. ನಿಮಗಾಗಿ ನಾವು ಏನು ಬೇಕಾದರೂ ಮಾಡಲು ಸಿದ್ಧರಿದ್ದೇವೆ.
ಅಂಕುಶ : ಛೆ...ಛೆ...ನನಗಾಗಿ ಅಲ್ಲ. ನಿಮ್ಮ ಊರಿಗೆ ಬರುವ ಸ್ವಾಮಿಗಳಿಗಾಗಿ, ಸ್ವಾಮಿ ಚೈತನ್ಯಕುಮಾರರಿಗಾಗಿ.
: ಹೌದು, ಸ್ವಾಮಿ ಚೈತನ್ಯಕುಮಾರರಿಗಾಗಿ.
(ಅಂಕುಶನ ಹಣೆಯ ಮೇಲೆ ಚಿಂತೆಯ ಗೆರೆಗಳು ಮೂಡುತ್ತವೆ)
: ಇಂಥ ವೇಳೆಯಲ್ಲಿ ನಿಮ್ಮ ಹಣೆಯ ಮೇಲೆ ನೆರಿಗೆಗಳು ಏಕೆ ?
: ಕೆರೆ ತೋಡಲು ಜನ ಇದ್ದಾರೆ, ಆಯುಧಗಳು ಇವೆ. ಮತ್ತೇನು ಬೇಕು ?
ಅಂಕುಶ : ಬೇಕು ಒಂದು ವಸ್ತು.
ಜನ : ಏನದು ?
ಅಂಕುಶ : ಕೆಲಸಕ್ಕಾಗಿ, ಚಟುವಟಿಕೆಗಳಿಗಾಗಿ ಒಂದು ದನಿ ಬೇಕು.
ಜನ : ದನಿ ಬೇಕೆ ? ತರೋಣ.
ಅಂಕುಶ : ಮನಸ್ಸು ಮತ್ತು ಶ್ರಮ ಸೇರಿಸಿ ಒಂದು ಮಾಡುವ ದನಿ. ಕಷ್ಟಗಳಿಗೆ ಎದೆಯಾನಿಸುವ ದನಿ.
ತಲೆಯ ಮೇಲಿನ ಭಾರ ಕಡಮೆ ಮಾಡುವ ದನಿ. ನನ್ನ ಮತ್ತು ನಿಮ್ಮದು ಒಂದಾದ ದನಿ.
(ಜನ ಗಲಿಬಿಲಿಗೊಳ್ಳುತ್ತಾರೆ)
: ಇಲ್ಲ. ಇಂಥ ವಸ್ತು ನಮ್ಮಲಿಲ್ಲ.
ಅಂಕುಶ : ಇಲ್ಲ ಹೇಗೆ ? ಇರಲೇಬೇಕು. ಕಳೆದುಕೊಂಡಿರಬಹುದು ನೀವು. ಹುಡುಕಿ.
: ಎಲ್ಲಿ ಹುಡುಕಲಿ ?

ಅಂಕುಶ : ಹುಡುಕಿ
ಹಿಟ್ಟು ಬೀಸುವ ಕಲ್ಲಿನಲ್ಲಿ
ಅಕ್ಕಿ ಕುಟ್ಟುವ ಒರಳಿನಲ್ಲಿ
ಉತ್ತುಬಿತ್ತುವ ಹೊಲದಲ್ಲಿ, ರಾಶಿ ಹಾಕದ ಬತ್ತದಲ್ಲಿ
ತರಕಾರಿಯ ತೋಪಿನಲ್ಲಿ, ಮನೆ ಮುಂದಿನ ಅಂಗಳದಲ್ಲಿ.

ಅಜ್ಜ: ನನಗೀಗ ನೆನಪಾಗ್ತಾ ಇದೆ. ನೀನು ಹೇಳಿದ ಥರದ ಒಂದು ವಸ್ತು ಇತ್ತು. ನೂಲ ಹುಣ್ಣಿಮೆಯ ನಂತರ ಸಮುದ್ರದ ಆರ್ಭಟ ಕಡಮೆಯಾದ ಮೇಲೆ ಅಂಬಿಗರ ದೋಣಿಗಳನ್ನು ಸಮುದ್ರದಲ್ಲಿ ಬಿಡುವ ಸಂದರ್ಭವಲ್ಲಿ ನಮ್ಮ ಹಿರಿಯರು ಹೋಗುತ್ತಿದ್ದರು. ಕೇವಲ ದೋಣಿಗಳನ್ನಷ್ಟೆ ಬಿಡೋದಕ್ಕಲ್ಲ, ಬೀಸಿದ ಬಲೆಯನ್ನು ಬಲಹಾಕಿ ಎಳೆಯೋದಕ್ಕೂ ನಮ್ಮ ಹಿರಿಯರು ಹೋಗುತ್ತಿದ್ದರಂತೆ. ಬೆಟ್ಟದ ಮೇಲಿರುವ ದೊಡ್ಡ ದೊಡ್ಡ ಮರಗಳನ್ನು ಕಡಿದು ಮರದ ನಾಟುಗಳನ್ನು ರಸ್ತೆಗೆ ತರುವ ಕೆಲಸವನ್ನೂ ನಮ್ಮ ಹಿರಿಯರು ಮಾಡುತ್ತಿದ್ದರಂತೆ. ಈಗ ಅದೇ ಕೆಲಸ ಮಾಡುತ್ತಿರುವ ಆನೆಗಳು ಈ ಕೆಲಸ ನಮ್ಮ ಪೂರ್ವಜರಿಂದಲೇ ಕಲಿತಿರಬೇಕು. ಬೆಟ್ಟ ಅಂದ ಮೇಲೆ ನೆನಪಾಯ್ತು. ಬೆಟ್ಟದ ಮೇಲಿರುವ ಹದಿನೆಂಟು ಅಡಿ ಎತ್ತರದ ಬೇತಾಳನ ಶಿಲಾ ಮೂರ್ತಿಯನ್ನು ಯಾರು ಬೆಟ್ಟದ ಮೇಲೆ ಏರಿಸಿದ್ರು ? ನಮ್ಮ ಹಿರಿಯರು. ಏರಿಸಿದ್ದಷ್ಟೆ ಅಲ್ಲ, ಅದನ್ನು ನಿಲ್ಲಿಸಿದರು. ಇವೆಲ್ಲ ಕೆಲಸ ಮಾಡುವಾಗ ಅವರ ಬಳಿ ನೀವು ಹೇಳಿದ ಥರದ ವಸ್ತು ಇರಲೇಬೇಕು. ಆದರೆ ಅದಾವ ವಸ್ತು ಅಂತ ನೆನಪಾಗ್ತಾ ಇಲ್ಲ.

(ಅಜ್ಜ ಹೇಳಿದ ಮಾತನ್ನು ಎಲ್ಲರೂ ಮಗ್ನರಾಗಿ ಕೇಳುತ್ತಾರೆ. ಪೂರ್ವಜರ ಸಾಧನೆ ಕೇಳಿ ಅಭಿಮಾನದಿಂದ ಖುಷಿಗೊಳ್ಳುತ್ತಾರೆ.)

ಅಂಕುಶ : ಖತೋಬಾನ ಬೆಟ್ಟ ನೀವೆಲ್ಲ ನೋಡಿದ್ರಾ ?

ಜನ : ಹೌದು.

ಅಂಕುಶ : ಮತ್ತೆ ನೋಡಿದಿರಾ ಬೇತಾಳನ ಮೂರ್ತಿ ?

ಜನ : ಹೌದು.

ಅಂಕುಶ : ಹದಿನೆಂಟು ಅಡಿಯ ಮೂರ್ತಿ ನಿಂತುಕೊಂಡಿದೆ ನನ್ನ ಥರ.

ಜನ : ಹೌದು.

ಅಂಕುಶ : ಎದ್ದು ನಿಲ್ಲಿಸುವ ಮೊದಲು ಮೂರ್ತಿ ಅಡ್ಡಬಿದ್ದಿತ್ತಲ್ಲ ?

(ಮೂರ್ತಿಯಂತೆ ಅಡ್ಡ ಬೀಳುತ್ತಾನೆ. ಅಷ್ಟರಲ್ಲಿ ಜನ ಅವನನ್ನು ಹಿಡಿದು ಕೊಳ್ಳುತ್ತಾರೆ. ನಿದಾನವಾಗಿ ಕೆಳಗಿಡುತ್ತಾರೆ)

ಜನ : ಹೌದು.

ಅಂಕುಶ : ಜಡವಾಗಿದ್ದ, ಭಾರವಾಗಿದ್ದ ಮೂರ್ತಿ ಹೇಗೆ ಎದ್ದು ನಿಲ್ಲಿಸಿದರು ? (ಅಜ್ಜ ಮುಂದೆ ಬರುತ್ತಾನೆ. ಅಂಕುಶನ ದೇಹ ಭಾರವಾಗಿದೆಯೆಂದು ಭಾವಿಸಿ ಅದನ್ನು ಎತ್ತಿಸಿಲ್ಲಿಸಲು ಎಲ್ಲರೂ ಕೈ ಹಚ್ಚುತ್ತಾರೆ. ಈ ಕೆಲಸಕ್ಕೆ ಬಲ ತುಂಬಲೆಂದು ಅಜ್ಜ- 'ಹಚ್ಚಿ ಕೈ...ಎತ್ತಿ ನಿಲ್ಲಿಸಿ' ಎಂದು ಹೇಳುತ್ತಾನೆ. ಎಲ್ಲರೂ ಒಂದೇ ದನಿಯಲ್ಲಿ 'ಎತ್ತಿರೋ ಎತ್ತಿ ಮೂರ್ತಿಯನ್ನು ಎತ್ತಿ' ಎಂದು ಹೇಳುತ್ತಾರೆ. ಅಂಕುಶನನ್ನು ಎತ್ತಿ ನಿಲ್ಲಿಸುತ್ತಾರೆ. 'ಎತ್ತಿರೋ ಎತ್ತಿ' ಎನ್ನುವಲ್ಲಿ ಒಂದೇ ದನಿಯಲ್ಲಿ ಹೇಳುವುದರಿಂದ ಆ ಶಬ್ದಗಳಿಗೆ ಒಂದು ಸ್ವರ, ಒಂದು ತಾಳ ಪ್ರಾಪ್ತವಾಗುತ್ತದೆ. ಜನ ಆ ಸ್ವರ-ತಾಳಗಳಿಗೆ ತಲೆದೂಗ ತೊಡಗುತ್ತಾರೆ. ಒಬ್ಬನಂತೂ ಮೈಮುರಿದು ಕುಣಿಯತೊಡಗುತ್ತಾನೆ)

ಒಬ್ಬವ : ಕಟ್ಟಿಗೆ ತರೋಕ್ಕೆ ಹೋಗುವಾಗ
ನಿನಗೆ ಭಾವಯ್ಯ ಕರೆಯುತ್ತಾನಮ್ಮ
ನಿನಗೆ ಭಾವಯ್ಯ ಕರೆಯುತ್ತಾನಮ್ಮ
ಕೆಂಪು ಸೀರೆ ಉಟ್ಟುಕೊಂಡರೆ
ನಿನಗೆ ದುಡ್ಡು ತೋರಿಸ್ತಾನಮ್ಮ
ನಿನಗೆ ದುಡ್ಡು ತೋರಿಸ್ತಾನಮ್ಮ
ಇಂತು ಭಾವಯ್ಯ ಕರಿತಾನೆ
ನಿನಗೆ ಮಾಳಿಗೆಯ ಮೇಲಮ್ಮ

ಎರಡನೆಯವನು : ಗಂಡುಬೀರಿಯಂತೆ ಕುಣಿಯುತ್ತ
ಗೆಳೆಯಾ ಗೆಳೆಯಾ ಮಳೆ ಹೊಯ್ತಲ್ಲಿ
ನಮ್ಮ ಗೆಳೆಯ ಹೋದ ಜೊತೆಯಲ್ಲಿ
ಬಾಳೆಯ ಸಿಪ್ಪೆತಿಂದು ಹೊಟ್ಟೆ
ಮುಟ್ಟಿ ಮುಟ್ಟಿ ನೋಡಿದ
(ಕೆಲವರು ಗುಂಪು ಕಟ್ಟಿ ಸುಗ್ಗಿಕುಣಿತ ಕುಣಿಯುತ್ತಾರೆ)
(ಒಂದು ಜಾನಪದ ಗೀತ ಹಾಡಿ ಕುಣಿಯತೊಡಗುತ್ತಾರೆ)
(ದೂರದಲ್ಲಿ ದನಿ ಕೇಳಿ ಹೆಂಗಸರು ಪತ್ತಿರ ಬರುತ್ತಾರೆ. ಮೊದಮೊದಲು ಅವರು ಗಂಡಸರನ್ನು ಕುತೂಹಲದಿಂದ ನೋಡುತ್ತಾರೆ. ಅನಂತರ ಗುಂಪು ಹಾಡತೊಡಗುತ್ತಾರೆ, ಕುಣಿಯುತ್ತಾರೆ. ಅಂಕುಶ ಒಂದು ಜಾನಪದ ನೃತ್ಯದ ದನಿ - ಸ್ವರ ಹಿಡಿದು ತನ್ನ ಮಾತುಗಳನ್ನು ಹಾಕಿ ಹಾಡುತ್ತಾನೆ, ಕುಣಿಯುತ್ತಾನೆ. ಜನರೂ ಅವನೊಂದಿಗೆ ಸಹಕರಿಸುತ್ತಾರೆ.
ಸ್ವಾಮಿ ಚೈತನ್ಯರ ಹೆಜ್ಜೆಗಳ ಸದ್ದು
ಸ್ವಾಮಿ ಚೈತನ್ಯರ ಹೆಜ್ಜೆಗಳ ಸದ್ದು

ಹಾರೆಗುದ್ದಲಿಗಳ ಮೇಲಿನ ತುಕ್ಕು ಉದುರಿ
ಮಲಗಿದವರೆಲ್ಲ ಎದ್ದು ನಿಲ್ಲುವರು
ನೆಟ್ಟಗೆ ನಿಂತಿರುವವರೆಲ್ಲ ಬಗ್ಗುತಿಹರು
ಮುದ್ದೆಯಾಗಿ ಕುಳಿತಿರುವರೆಲ್ಲ ಸದ್ದಿಲ್ಲದೆ ನಿಂತಿಹರು
ಕಳೆದು ಹೋದ ಸ್ವರ ಒಂದಾಗಿ ತರುತಿಹರು.)

(ಅಂಕುಶನ ಜೊತೆ ಎಲ್ಲರೂ ಕುಣಿಯತೊಡಗುತ್ತಾರೆ)

(ಗೀತೆಯ ತಾಳದಲ್ಲಿ ಮೇಳ ಒಂದಾಗುತ್ತದೆ. ಅತ್ತ ಇತ್ತ ಕಡೆ ಹೋಗುತ್ತಾರೆ. ಕೆರೆ ತೋಡಲು ಸ್ಥಳ ಹುಡುಕುತ್ತಾರೆ. ಹಾರೆ, ಗುದ್ದಲಿ, ಪಿಕಾಸು, ಬುಟ್ಟಿ ತೆಗೆದುಕೊಂಡು ಬರುತ್ತಾರೆ. ಅಜ್ಜ ಅಲ್ಲಿ ಇಲ್ಲಿ ನೋಡಿ ಸ್ಥಳದ ಅಂದಾಜು ಮಾಡುತ್ತಾರೆ. ಒಂದು ಸ್ಥಳ ಅಜ್ಜ ಹುಡುಕಿ ತೆಗೆಯುತ್ತಾನೆ. ಅಲ್ಲಿ ಶಾಸ್ತ್ರ ಕಾರ್ಯ ನಡೆಯುತ್ತದೆ. ಪಿಕಾಸು, ಗುದ್ದಲಿಯಿಂದ ಜನ ಅಗೆಯ ತೊಡಗುತ್ತಾರೆ. ಗುದ್ದಲಿಯಿಂದ ತೆಗೆದ ಮಣ್ಣು ಕಬ್ಬಿಣದ ಬುಟ್ಟಿಯಲ್ಲಿ ತುಂಬುತ್ತಾರೆ. ಅದನ್ನು ಕೆಲಸಗಾರರ ತಲೆಯ ಮೇಲೆ ಏರಿಸುತ್ತಾರೆ. ಮಕ್ಕಳ ತಲೆಯ ಮೇಲೆ ಚಿಕ್ಕ ಪುಟ್ಟ ಕಲ್ಲುಗಳನ್ನೇರಿಸುತ್ತಾರೆ. ಅಗೆದ ಮಣ್ಣು ಕಲ್ಲುಗಳೆಲ್ಲ ಒಂದೆಡೆ ರಾಶಿ ಬೀಳುತ್ತದೆ. ಕೆರೆ ತೋಡುವ ಕಾರ್ಯ ತೊಡಗಿದ್ದು ನೋಡಿ ಅಲ್ಲಿಂದ ಅಂಕುಶ ಮೆಲ್ಲಗೆ ಮಾಯ ವಾಗುತ್ತಾನೆ. ಕೆಲಸ ನಡೆಯುತ್ತಿರುವಾಗ ಚಿಕ್ಕಪುಟ್ಟ ಗಾಯಗಳು, ಅಪಘಾತಗಳಾಗುತ್ತವೆ. ಒಬ್ಬ ಅಗೆಯುತಿದ್ದಾಗ ಅವನ ಹಣೆಗೆ ಪಿಕಾಸಿನ ತುದಿ ತಾಗುತ್ತದೆ. ಪಿಕಾಸು ಬದಿಗೆ ಒಗೆದು ಅವನು ನರಳುತ್ತಾನೆ. ಕೆಲವರು ಅವನ ರಕ್ತ ಒರೆಸುತ್ತಾರೆ. ಅವನ ಶುಶ್ರೂಷೆ ಮಾಡುತ್ತಾರೆ. ಕಲ್ಲು ತಲೆಯ ಮೇಲೆ ಎತ್ತಿಕೊಳ್ಳುವಾಗ ಒಂದು ಕಲ್ಲು ಹುಡುಗನ ಕಾಲ ಮೇಲೆ ಬೀಳುತ್ತದೆ. ಅವನು ಕೂಗುತ್ತ ಕುಂಟುತ್ತ ಕುಂಟುತ್ತ ಓಡುತ್ತಾನೆ. ಒಂದು ಹೆಣ್ಣು ಮಗಳಿಗೆ ತಲೆಯ ಮೇಲೆ ಏರಿಸಿದ ಕಬ್ಬಿಣದ ಬುಟ್ಟಿಯ ಭಾರ ತಡೆಯಲಾಗುವುದಿಲ್ಲ. ಅವಳು ತೂಕ ತಪ್ಪಿ ಬೀಳುತ್ತಾಳೆ. ವಾಂತಿ ಮಾಡುತ್ತಾಳೆ. ಮಿಕ್ಕ ಹೆಣ್ಣುಮಕ್ಕಳು ಅವಳ ಶುಶ್ರೂಷೆ ಮಾಡುತ್ತಾರೆ. ಹೀಗೆ ಅಲ್ಲೊಂದು ಇಲ್ಲೊಂದು ಚಿಕ್ಕಪುಟ್ಟ ಅಪಘಾತಗಳಾಗುತ್ತದೆ. ಆದರೆ ಕೆರೆ ತೋಡುವ ಕೆಲಸದ ಮೇಲೆ ಇದರ ಪರಿಣಾಮ ಆಗುವುದಿಲ್ಲ. ಅಜ್ಜ ಎಲ್ಲ ಕೆಲಸದ ಕಡೆ ನಿಗಾ ಇಡುತ್ತಾನೆ. ಅಗತ್ಯವಿರುವ ಕಡೆ ತಾನು ಕೈ ಹಚ್ಚುತ್ತಾನೆ. ತುಂಬ ದಿನ ಈ ಕೆಲಸ ನಡೆದಿದೆಯೆಂಬುದು ಬೆಳಕು ಕತ್ತಲೆಯ ಪ್ರತೀಕದಿಂದ ಗೊತ್ತಾಗುವಂತಿರಬೇಕು. ಈಗ ಕೆಲಸ

ಕೊನೆಯ ಹಂತದಲ್ಲಿದೆ. ಕೆರೆಯ ಕೆಲಸ ಮುಗಿಯುತ್ತ ಬಂದಿದೆ. ಕೊನೆಗೆ ಒಮ್ಮೆ ಕೆಲಸ ಮುಗಿಯುತ್ತದೆ. ಕೆಲಸ ಆಯುಧಗಳನ್ನು ಜನ ಎತ್ತಿ ಬೇರೆ ಕಡೆ ಇಡುತ್ತಾರೆ, ಬೆವರು ಒರೆಸುತ್ತಾರೆ, ವಿಶ್ರಾಂತಿ ತೆಗೆದುಕೊಳ್ಳುತ್ತಾರೆ.)

: ಅಗತ್ಯಕ್ಕಿಂತ ಹೆಚ್ಚು ಅಗೆದದ್ದಾಯ್ತು.

: ಇದು ಸಣ್ಣ ಕೆರೆಯಲ್ಲ. ದೊಡ್ಡ ಕೆರೇನೇ ಆಯ್ತು.

: ಈ ಪರಿಸರದಲ್ಲಿ ಇಂಥದೊಂದು ಕೆರೆ ಬೇರೆ ಇಲ್ಲ. ಇನ್ನಿಂಥ ಕೆರೆ ಆಗುವುದೂ ಇಲ್ಲ. ಬಾಯಿಯಲ್ಲಿ ಹೇಳುವಷ್ಟು ಸುಲಭ ಅಲ್ಲ ಅದು.

: ಹತ್ತು ಜನ ಕೈ ಹಚ್ಚಿದರು ಅಂತ ಕೆಲಸ ಮುಗಿದ್ಹೋಯ್ತು.

: ಈಗ ಈ ವಠಾರದಲ್ಲಿ ಕಳೆದು ಹೋದ ದನಗಳನ್ನು ಈ ಕೆರೆಯಲ್ಲಿ ಹುಡುಕಬೇಕು.

: ಅಂದರೆ ?

: ಎಲ್ಲ ದನಗಳೂ ಇನ್ನು ಮುಂದೆ ಈ ಕೆರೆಗೇ ನೀರು ಕುಡಿಯಲು ಬರುತ್ತವೆ.

: ಆದರೆ ಕೆರೆಗೆ ನೀರು ಬರುವುದು ಯಾವಾಗ ?

: ಯಾವಾಗ ಅಂದ್ರೆ ? ಯಾವ ಹೊತ್ತಿಗೂ ನೀರು ಬರಬಹುದು.

: ಈಗ ನೀರು ಬಂದಿರಲೂ ಬಹುದು.

: ಇಲ್ಲ ನಾನು ತೀರ ಆಳಕ್ಕಿಳಿದು ಕೆಲಸ ಮಾಡ್ತಾ ಇದ್ದೆ. ಎಲ್ಲರಾದ ಮೇಲೆ ನಾನೇ ಮೇಲೆ ಬಂದಿದ್ದು. ನೀರು ಬರಲಿಲ್ಲ. ಆದರೆ ಹನೀತಾ ಇದೆ.

: ಇನ್ನು ಕೆಲವೇ ದಿನಗಳ ಸಮಸ್ಯೆ.

: ದಿನಗಳೇ...ಕೆಲವೇ ಗಂಟೆಗಳು.

(ಹೆಣ್ಣುಮಕ್ಕಳು ಒಂದೆಡೆ ನಿಂತು ಮಾತಾಡುತ್ತಿದ್ದಾರೆ)

: ಕೆರೆಯಲ್ಲಿ ಯಾವಾಗ ನಿರು ನೋಡೇನೊ ಅಂತಾಗಿದೆ.

: ಕೆರೆಯ ನೀರಿನಲ್ಲಿ ನನ್ನನ್ನು ನಾನೇ ನಿಂತು ನೋಡಿಕೊಳ್ಳ ಬೇಕೂಂತಿದ್ದೀನಿ.

: ನೀನಂತೂ ಬಿಡು...ಚೆನ್ನಾಗಿ ಕಾಣ್ತೆ.

: ಒಂದು ಬಾರಿ ನೀರು ಬಂತೂಂದ್ರೆ, ನೀರಿನ ಕಾಟ ತಪ್ಪಿದ ಹಾಗೆ ಆಗುತ್ತೆ.

: ನೀರು ಬಂದರೆ ಸಾಕು. ನಾನಂತೂ ಮನೆಲಿದ್ದ ಪಾತ್ರೆ ಪಡಗ ತುಂಬಿಡ್ತೀನಿ.

: ಅದ್ಯಾಕಮ್ಮ. ಊರಲ್ಲಿ ನೀರಿರುವಾಗ ಪಾತ್ರೆ ಪಡಗ ಯಾಕೆ ತುಂಬಿಡಬೇಕು ?

: ನಾನಂತೂ ಗಂಜಿಗೆ ಸಾಕಷ್ಟು ನೀರು ಹಾಕ್ತೀನಿ. ಗಂಜಿ ಕುಡಿಯುವವರು ಹೊಟ್ಟೆ ತುಂಬ ಕುಡೀಲಿ ಅವರ ಹೊಟ್ಟೆ ತಂಪಾಗಲಿ.

: ಎಲ್ಲಕ್ಕಿಂತ ಮೊದಲು ನಾನು ತಲೆಯ ಮೇಲೆ ಸ್ನಾನ ಮಾಡಬೇಕು. ತವರು ಮನೆಗೆ ಹೋದಾಗ ತಲೆಮೇಲೆ ಸ್ನಾನ ಮಾಡಿದ್ದೆ. ಎಷ್ಟೊ ದಿನಗಳಾದುವು.

: ಕೆರೆತುಂಬಿದ್ದು ನೋಡಿದ ಮೇಲೆ ನನಗೆ ಏನನ್ನಿಸಬಹುದು ಗೊತ್ತೆ?

: ಏನನ್ನಿಸಬಹುದು ?

: ಕೆರೆಯಲ್ಲಿ ಜೀವ ಕೊಡೋಣ ಅಂತ ಅನ್ನಿಸಬಹುದು !

(ನಗುತ್ತಾರೆ.)

: ಸಾಕು - ಸಾಕು. ನೀನು ಮತ್ತೆ ಜೀವ ಕೊಡೋದು ಉಳೀಲಿಲ್ಲ. ನಿನಗಿಂತ ಹಿಂದಿನ ಸೊಸೆಗಳು ಬಾವಿಯಲ್ಲಿ ಜೀವ ಕೊಟ್ಟಿದ್ದಾರೆ.

(ಒಬ್ಬನು ಗದ್ದಲ ಮಾಡುತ್ತ ಓಡುತ್ತ ಬರುತ್ತಾನೆ)

ಒಬ್ಬವ : ಓಯ್...ಕೆರೆಗೆ ನೀರು ಬಂತು. ಕೆರೆಗೆ ನೀರು ಬಂತು.

(ಗಂಡಸರು - ಹೆಂಗಸರು ತಕ್ಷಣ ಎದ್ದು ನಿಂತು ಅವನ ಸುತ್ತಲೂ ಕೂಡುತ್ತಾರೆ.)

ಒಬ್ಬವ : ಹನಿ ಹನಿ ಬೀಳುತ್ತಿತ್ತಲ್ಲ. ಅಲ್ಲಿಯೇ ಝರಿ ಒಡೆದು ಬಂತು. ಝರಿಯೇನೂ ದೊಡ್ಡದಿದೆ. ನೋಡು ನೋಡುತ್ತಿದ್ದಂತೆ ಇಷ್ಟಿರುವುದು ಇಷ್ಟಾಯಿತು. ನಾನು ಹೌಹಾರಿಬಿಟ್ಟೆ. ಹೀಗೆ ಭಸಭಸ ಹರಿಯುವ ನೀರು ನೋಡೋಕಾಗುತ್ತದೆಯೆ ? ಅಮ್ಮ ! ಜೀವ ಉಳಿದಿದ್ದೆ ದೊಡ್ಡದು. ಅಲ್ಲೇ ಖುಷಿಯಿಂದ ಎದೆಯೊಡೆದು ಪ್ರಾಣ ಬಿಡೋದಿತ್ತು.

: ನನ್ನ ಹೃದಯವೂ ಅಶಕ್ತವಾಗಿದೆ. ನನ್ನಿಂದ ಇಷ್ಟೊಂದು ನೀರು ನೋಡೋಕ್ಕಾಗಲ್ಲ.

: ಯಾರ ಹೃದಯಗಳು ಅಶಕ್ತವಾಗಿವೆಯೋ ಅವರೆಲ್ಲ ನಿಲ್ಲಿ. ನಾವು ಹೋಗ್ತೀವಿ ಜಲದರ್ಶನಕ್ಕೆ. (ಹೆಂಗಸರಿಗೆ) ಏಯ್-ಹೆಣ್ಣು ಮಕ್ಕಳೆ... ನೀರು ತುಂಬೋಕ್ಕೆ ಪಾತ್ರೆ ತನ್ನಿ.

(ಗಂಡಸರು-ಹೆಂಗಸರು ಕೆರೆಯ ಕಡೆ ಓಡುತ್ತಾರೆ. ಮುಂದಿನಿಂದ ಅಂಕುಶ ಬರುತ್ತಾನೆ. ಅವನನ್ನು ನೋಡಿ ಎಲ್ಲರೂ ನಿಲ್ಲುತ್ತಾರೆ.)

: ಕೆರೆಗೆ ನೀರು ಬಂದಿದೆ.

ಅಂಕುಶ : ನನಗೆ ಗೊತ್ತುಂಟು.

: ನೀವು ಬನ್ನಿ ಕೆರೆಗೆ. ಮೊದಲು ನೀವೇ ಒಂದು ತಂಬಿಗೆ ಎತ್ತಿಕೊಳ್ಳಿ-ಒಂದು ಗುಟುಕು ಕುಡೀರಿ.

ಅಂಕುಶ : ಇಲ್ಲ. ಆ ಕೆರೆಯ ಒಂದು ಹನಿ ನೀರು ಕುಡಿಯುವ ಅಧಿಕಾರವೂ ನನಗಿಲ್ಲ.

: ಅಧಿಕಾರ ಯಾಕಿಲ್ಲ. ನಾವು ಹೇಳ್ತಿದ್ದೀವಿ ನಿಮಗೆ.

ಅಂಕುಶ : ಆ ಅಧಿಕಾರ ನಮಗೂ ಇಲ್ಲ. ನಿಮಗೂ ಇಲ್ಲ. ಈ ಕೆರೆಯ ಮೊದಲ ಗುಟುಕು ನೀರು ಕುಡಿಯುವ ಅಧಿಕಾರ ಸ್ವಾಮಿಚೈತನ್ಯ ಕುಮಾರರಿಗೆ ಮಾತ್ರ ಇದೆ. ಅದು ಅವರ ಪ್ರೇರಣೆಯ ಫಲ. ಒಂದುಬಾರಿ ಅವರು ನೀರು ಎಂಜಲು ಮಾಡಿದ ಬಳಿಕ...

: ಆದರೆ ಸ್ವಾಮಿಗಳು ಇಲ್ಲಿಗೆ ಯಾವಾಗ ಬರ್ತಾರೆ ?

ಅಂಕುಶ : ಅವರು ಒಂದ್ ಬಾರಿ ಘೋಷಣೆ ಮಾಡಿದರು ಅಂದ್ರೆ ಅವರು ಬಂದ ಹಾಗೇ. ಅವರು ಪ್ರತ್ಯಕ್ಷ ಈ ಊರ್ನಲ್ಲಿ ಇಲ್ಲದಿದ್ರೂ ಅವರ ಮಹಿಮೆ ಇಲ್ಲಿದ್ದೇ ಇದೆ. ನಾನು ನಿಮಗೆ ಇಷ್ಟೇ ಸೂಚನೆ ಕೊಡ್ತೀನಿ. ನೀವು ಸ್ವಾಮಿ ಚೈತನ್ಯಕುಮಾರರ ಕೃಪೆ ಸಂಪಾದನೆ ಮಾಡಿ. ಅವರ ಅವಕೃಪೆಗೆ ಬಲಿಯಾಗಬೇಡಿ. ನನ್ನ ಹೇಳಿಕೆ ನಿಮ್ಮ ಗಂಟಲಲ್ಲಿ ಇಳಿಯಲಿಕ್ಕಿಲ್ಲ. ದಾಹದಿಂದ ಗಂಟಲೊಣಗಿದ್ದವನ ಕೈಯಲ್ಲಿದ್ದ ನೀರಿನ ಲೋಟ ಒತ್ತಾಯಪೂರ್ವಕ ಕಿತ್ತುಕೊಳ್ತಿದ್ದೀನಿ ಅಂತ ನಿಮಗನ್ನಿಸಬಹುದು. ನಿಮಗೆ ಹಾಗೆ ಕಂಡರೆ ಅದು ಇಷ್ಟ. ನಾನು ಅಸಹಾಯಕ.

(ಆತ ಹೋಗಲು ಹೊರಡುತ್ತಾನೆ. ಜನ ಅವನನ್ನು ತಡೆದು ನಿಲ್ಲಿಸುತ್ತಾರೆ)

: ಇಲ್ಲ. ನಾವು ನಿಮ್ಮ ಮಾತು ಮೀರೋದಿಲ್ಲ. ನೀರು ತರಿಸಲು ನಾವು ಕಷ್ಟಪಟ್ಟಿದ್ದು ನಿಜ. ಆದರೆ ಮೂಲ ಪ್ರೇರಣೆ ಸ್ವಾಮಿಗಳದ್ದೆ.

: ಸ್ವಾಮಿಗಳು ನೀರಿನ ರುಚಿ ನೋಡಿದ ಹೊರತು ನಾವು ಒಂದು ಹನಿ ನೀರನ್ನೂ ಬಾಯಿಗಿಡುವುದಿಲ್ಲ.

ಅಂಕುಶ : ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕೆರೆಯ ರಕ್ಷಣೆ ಮಾಡಿ. ಕೆರೆಯ ರಕ್ಷಣೆಗಾಗಿ ಒಬ್ಬ ಕಾವಲುಗಾರನನ್ನು ಇಡಿ.

: ಕಲ್ಪನೆ ಚೆನ್ನಾಗಿದೆ.

: ಯಾರಾದರೂ ಒಬ್ಬರು ಮುಂದಾಗಬೇಕು.

(ಜನರ ಗುಂಪಿನಲ್ಲಿದ್ದ ಅಜ್ಜ ಮುಂದೆ ಬರುತ್ತಾರೆ)

ಅಜ್ಜ : ಹಾಗೆ ನೋಡಿದ್ರೆ ನನಗೆ ಕಷ್ಟ ಕೆಲಸಗಳು ಒಗ್ಗುವುದಿಲ್ಲ. ಕೆರೆಯ ರಕ್ಷಣೆಯ ಜವಾಬ್ದಾರಿ ನಾನು ಹೊತ್ತುಕೊಳ್ತೀನಿ. (ಅಂಕುಶನಿಗೆ)

ನನಗೆ ಹೇಳಿ. ಮನುಷ್ಯನಿಂದ ನೀರಿನ ರಕ್ಷಣೆ ಮಾಡಲು ಸಾಧ್ಯವೆ? ದನಕರು ಎಮ್ಮೆ ಕುರಿಕೋಳಿಗಳ ರಕ್ಷಣೆ ಮಾಡಬಹುದು. ಆದರ ಹಕ್ಕಿಪಕ್ಕಿಗಳಿಂದ ಚಿಟ್ಟೆ ಕ್ರಿಮಿಕೀಟಗಳಿಂದ ರಕ್ಷಣೆ ಮಾಡುವುದು ಹೇಗೆ ?

ಅಂಕುಶ : ಅವುಗಳ ಮಾತು ಬಿಡಿ. ತಮಗಾಗಿಯೇ ಕೆರೆಯಲ್ಲಿ ನೀರು ಬಂದಿದ ಅಂತ ಅವರು ತಿಳಿದುಕೊಳ್ಳಬಹುದು. ಆದರೆ ನಿಮ್ಮ ಮಾತು ಹಾಗಲ್ಲ. ಕೆರೆಯ ನೀರು ಯಾರಿಗಾಗಿ ಇದೆ ಅಂತ ನಿಮಗೆ ಗೊತ್ತು ಪ್ರಾಣಿ ಪಕ್ಷಿಗಳಿಗೆ ರಿಯಾಯಿತಿ ಇರುತ್ತೆ. ಆದರೆ ನಿಮಗೆ ಆ ರಿಯಾಯಿತಿ ಖಂಡಿತ ಇಲ್ಲ. ತನ್ನ ಪ್ರೇರಣೆಯಿಂದ ನಿರ್ಮಾಣವಾದ ಕೆರೆಯ ನೀರು ನೀವು ಮೊದಲು ಎಂಜಲು ಮಾಡಿದಿರಿ ಅಂತ ಸ್ವಾಮಿಗಳಿಗೆ ತಿಳಿದರೆ-ತಿಳಿದೇ ತಿಳಿಯುತ್ತೆ. ಆಗ ಏನಾಗಬಹುದು ಗೊತ್ತುಂಟೆ ? ನೀರಿಗಾಗಿ ನೀವು ವಿಲಿವಿಲಿ ಒದ್ದಾಡಬೇಕಾಗ ಬಹುದು. ಇಂಥ ಒಂದಲ್ಲ ಹತ್ತು ಕೆರೆ ತೋಡಿದ್ದರೂ ಒಂದು ಹನಿ ನೀರು ಬರಲಿಕ್ಕಿಲ್ಲ. ತಲೆಯ ಮೇಲಿನ ಗಾಯ ಮಾಯಿಸುವ ಸಲುವಾಗ ಅಶ್ವತ್ಥಾಮ ವರ್ಷಗಟ್ಟಲೆ ಮನೆ ಮನೆಗೆ ಹೋಗಿ ಭಿಕ್ಷೆ ಬೇಡಿದಂತೆ ನಿಮ್ಮ ಎಲ್ಲ ಪೀಳಿಗೆಯ ಜನ ಭಣಗುಡುವ ಕೆರೆಯ ದಂಡೆಯಲ್ಲಿ ಒಂದು ಹನಿ ನೀರಿಗಾಗಿ ಒದ್ದಾಡಬೇಕಾಗಬಹುದು. ನಿಮ್ಮ ಬಾವಿಯ ಆಖ್ಯಾಯಿಕೆಯಾದಂತೆ ಇದೂ ಒಂದು ಆಖ್ಯಾಯಿಕೆಯಾಗಬಹುದು.

ಜನ : (ಕೂಗಿ) ಇಲ್ಲ. ನಾವು ಹೀಗಾಗಲು ಬಿಡುವುದಿಲ್ಲ.

(ದೂರದಿಂದ ಒಬ್ಬ ಹುಡುಗ ಕುಣಿದು ಕುಪ್ಪಳಿಸುತ್ತ ಬರುತ್ತಿದ್ದಾನೆ.)

ಹುಡುಗ : ನಾನು ನೀರು ಕುಡಿದೆ. ಹೊಟ್ಟೆತುಂಬ ನೀರು ಕುಡಿದೆ.

(ಎಲ್ಲರ ಮಧ್ಯೆ ಕೂಗುತ್ತ ಕುಣಿಯುತ್ತಾನೆ. ಎಲ್ಲರೂ ಭಯದಿಂದ ಕಂಗಾಲಾಗಿದ್ದಾರೆ. ಹುಡುಗ ಅಜ್ಜನನ್ನು ಅಪ್ಪಿಕೊಳ್ಳುತ್ತಾನೆ.)

ಹುಡುಗ : ಅಜ್ಜಯ್ಯ-ನೀವು ಮಾಡಿದ ಕೆರೆಯ ನೀರು ನಾನು ಕುಡಿದೆ.

(ಎಲ್ಲರೂ ಗಲಿಬಿಲಿಗೊಂಡಿದ್ದು ನೋಡಿ ಅಂಜುತ್ತಾನೆ)

: ಅಜ್ಜಯ್ಯ ಏನಾಯ್ತು ? ನಾನು ನೀರು ಕುಡಿಯಬಾರದಿತ್ತೆ ?

ಅಜ್ಜ : (ಅಂಕುಶನಿಗೆ) ಹುಡುಗನಿಗೆ ಶಿಕ್ಷೆ ಕೊಡೋಕ್ಕಾಗಲ್ಲ. ಈತ ನನ್ನ ಮೊಮ್ಮಗ. ಅವನಿಗೆ ತಂದೆ-ತಾಯಿ ಯಾರೂ ಇಲ್ಲ.

ಅಂಕುಶ : ಅವನನ್ನು ಕ್ಷಮೆ ಮಾಡಲು ನಾನು ಯಾರು ? ನಿಮಗೆ ಬೇಕಿದ್ದರೆ ನೀವು ಅವನನ್ನು ಶಿಕ್ಷಿಸಬಹುದು.

ಜನ : ಆದರೆ ....?

ಅಂಕುಶ : ಇದರಿಂದ ಮುಂದಾಗುವ ಅನಿಷ್ಟ ತಪ್ಪುತ್ತದೆಯೆಂದಾಗುವುದಿಲ್ಲ. ಈ ಹುಡುಗ ನೀರು ಕುಡೀತಾನಾದ್ರೆ ನೀವೆಲ್ಲರೂ ನೀರು ಕುಡಿಯ ಬಹುದು. ಸ್ವಾಮಿ ಚೈತನ್ಯಕುಮಾರರ ನೀವು ಅವಮಾನ ಮಾಡಿದ್ರಿ.

: ಇದಕ್ಕೆ ಮುಂದೇನುಪಾಯ ?

ಅಜ್ಜ: ಮೊಮ್ಮಗನ ಶಿಕ್ಷೆ ನಾನು ಅನುಭೋಗಿಸಲು ಸಿದ್ಧನಾಗಿದ್ದೀನಿ.

ಅಂಕುಶ : ಮೊಮ್ಮಗನ ಶಿಕ್ಷೆ ನೀನು ಹೇಗೆ ಅನುಭವಿಸಲು ಸಾಧ್ಯ ? ಅವನ ಬಾಯಿ ಅಂದರೆ ನಿನ್ನ ಬಾಯಿಯಲ್ಲ. ಅವನ ಹೊಟ್ಟೆಯಂದ್ರೆ ನಿನ್ನ ಹೊಟ್ಟೆಯಲ್ಲ. ಅವನ ಶೀಕ್ಷೆ ಅವನೇ ಅನುಭವಿಸಬೇಕು.

ಅಜ್ಜ: (ಅವನನ್ನು ಹೊಟ್ಟೆಯ ಬಳಿ ಅವಚಿಕೊಳ್ಳುತ್ತ) ಯಾವ ಶಿಕ್ಷೆ ?

ಅಂಕುಶ : ಒಬ್ಬನು ಮಾಡಿದ ಅಪರಾಧಕ್ಕೆ ಹತ್ತು ಜನ ಮಾನ್ಯತೆ ಕೊಟ್ಟರೆ ಆ ಹತ್ತು ಜನ ಆ ಅಪರಾಧ ಮಾಡಿದ್ದಾರೆ ಅಂತ ಅದರ ಅರ್ಥ.

: ನಮಗೆ ಹಾಗಾಗೋದು ಬೇಡ.

: ನಮಗೆ ಸ್ವಾಮಿಗಳ ಕೃಪೆ ಬೇಕು. ಅವಕೃಪೆ ಬೇಡ.

ಅಂಕುಶ : ಹಾಗಿದ್ದರೆ ಈ ಹುಡುಗನ ಹೊಟ್ಟೆಯಲ್ಲಿದ್ದ ನೀರು ಅವನ ರಕ್ತದಲ್ಲಿ ಸೇರುವ ಮೊದಲೇ ಹೊರಗೆ ತೆಗೆಯಿರಿ. ಕೆರೆಯ ಕಾವಲುಗಾರ ಈ ಕೆಲಸಕ್ಕೆ ಮುಂದಾಗಬೇಕು.

(ಹುಡುಗ - ಅಜ್ಜ ಗಟ್ಟಿಯಾಗಿ ಅಪ್ಪಿಕೊಳ್ಳುತ್ತಾನೆ. ಎಲ್ಲರೂ ದಿಗಿಲು ಗೊಂಡಿದ್ದಾರೆ. ಹೊಟ್ಟೆಯಲ್ಲಿದ್ದ ನೀರು ಹೇಗೆ ಹೊರಗೆ ಹಾಕುವುದು ಎಂಬ ಗೊಂದಲದಲ್ಲಿ ಅವರು ಸಿಲುಕಿಕೊಂಡಿದ್ದಾರೆ. ಈ ಒಗಟು ಹೇಗೆ ಬಿಡಿಸುವುದು ಎಂದು ಎಲ್ಲರೂ ಅಂಕುಶನ ಮುಖ ನೋಡುತ್ತಿದ್ದಾರೆ. ಅಂಕುಶ ಹುಡುಗನನ್ನು ತಲೆ ಕೆಳಗು ಮಾಡು ಎನ್ನುವಂತೆ ಸಂಜ್ಞೆ ಮಾಡಿ ಆತ ಅಲ್ಲಿಂದ ಹೊರಟು ಹೋಗುತ್ತಾನೆ. ಜನ ಓಡುತ್ತ ಹೋಗಿ ಅಜ್ಜನ ಅಪ್ಪುಗೆಯಲ್ಲಿದ್ದ ಹುಡುಗನನ್ನು ಎಳೆದು ತರುತ್ತಾರೆ. ಕಾಲನ್ನು ಹಿಡಿದು ತಲೆ ಕೆಳಗೆ ಮಾಡುತ್ತಾರೆ. ಹೆಣ್ಣುಮಕ್ಕಳ ಅಂಜಿಕೆಯಿಂದ ನಿಲ್ಲುತ್ತಾರೆ. ಹುಡುಗ ಕೂಗುತ್ತಾನೆ. ಜನ ಅವನನ್ನು ದೂರ ಕರೆದುಕೊಂಡು ಹೋಗುತ್ತಾರೆ. ಭಯಾನಕ ಸ್ವರದಲ್ಲಿ ಒಂದು ಗೀತೆ ಕೇಳಿಬರುತ್ತದೆ. ಕತ್ತಲೆ ಆವರಿಸುತ್ತದೆ.)

(ಕೆರೆಯ ದಂಡೆಯ ಮೇಲೆ ಅಜ್ಜಯ್ಯ ಕೈಯಲ್ಲಿ ಕೋಲು ಹಿಡಿದು ಕುಳಿತಿದ್ದಾನೆ. ಬದಲಾಗಿದ್ದಾನೆ. ಅಂಜುಕುಳಿಯಾಗಿದ್ದಾನೆ. ದೂರದಲ್ಲಿ ಹೆಣ್ಣುಮಕ್ಕಳ ದನಿ ಅವರ ಕಿವಿಯ ಮೇಲೆ ಬೀಳುತ್ತದೆ. ಓಡುತ್ತ ಹೋಗಿ ಕೆರೆಗೆ ಬರುವವರ ದಾರಿ ತಡೆಯುತ್ತಾನೆ. ಹೆಂಗಸರ ಒಂದು ಗುಂಪು ಪಾತ್ರೆಗಳನ್ನು ಹಿಡಿದು ನೀರಿಗೆ ಬರುತ್ತಾರೆ.)

ಅಜ್ಜ: ಕೆರೆಯ ನೀರು ಒಯ್ದು ಬಿಟ್ಟೀರಾ ?

: ಇಲ್ಲ, ಇಲ್ಲ ಒಯ್ಯೋದಿಲ್ಲ.

: ನಾವು ಮೊದಲಿನ ಹಾಗೇ ನೀರು ತರೋಕ್ಕೆ ಹೋಗ್ತಾ ಇದ್ದೀವಿ.

: ಮನೆತುಂಬ ಕಾಳುಕಡಿ ತಿನ್ನುವವರ ಬಾಯಿ ಹಿಡಿ ಎಂಬಂತಾಗಿದೆ ನಮ್ಮ ಸ್ಥಿತಿ.

: (ಹಿಂದಿನ ನೆನಪು ಮಾಡಿ) ಅಜ್ಜಯ್ಯ ನಾವು ಹೆಂಗಸರು ಎಲ್ಲಿಂದ ನೀರು ತರ್ತೀವಿ ಅಂತ ಗೊತ್ತಿದೆಯೆ ?

(ಎಲ್ಲರೂ ನಗುತ್ತ ಮುಂದೆ ಸಾಗುತ್ತಾರೆ)

(ಅಜ್ಜ ಮತ್ತೆ ಕೈಯಲ್ಲಿ ಕೋಲು ಹಿಡಿದು ಕಾವಲು ಕಾಯುತ್ತಾನೆ. ಅಲ್ಲಿಯೇ ಕೂರತೊಡಗುತ್ತಾನೆ. ಹಕ್ಕಿಗಳ ಸದ್ದು ದನಕರುಗಳ ಕೂಗು ಕೇಳಿ ಎಚ್ಚರ ಗೊಳ್ಳುತ್ತಾನೆ, ಕೂಗುತ್ತಾನೆ.)

ಅಜ್ಜ: ಎಚ್ಚರ...ನೀರಿಗೆ ಬಾಯಿ ಹಚ್ಚಿದರೆ ಜೋಕೆ. ತಲೆ ಕೆಳಗು ಮಾಡಿ ನೀರು ಹೊರಗೆ ಹಾಕುತ್ತೇನೆ. ನನ್ನ ಮೊಮ್ಮಗ ನೀರು ಕುಡಿಯ ಕೂಡದಾದರೆ ನೀವು ಕ್ರಿಮಿ ಕೀಟಗಳೂ ನೀರಿಗೆ ಬಾಯಿ ಹಾಕುವಂತಿಲ್ಲ. ಎಚ್ಚರ.

(ದೂರದಲ್ಲಿ ಹಾಡಿನ ಸ್ವರ ಕಿವಿಯ ಮೇಲೆ ಬೀಳುತ್ತದೆ. ಅಜ್ಜನದೇ ಆ ಭಾವನೆ ಆ ಹಾಡಿನ ತಾಳದಲ್ಲಿಯೇ ಕೈಯಲ್ಲಿ ಕೋಲು ಹಿಡಿದು ಅಜ್ಜ ಅವುಗಳ ಹಿಂದೆ ಬೀಳುತ್ತಾನೆ.)

ಅಜ್ಜ ಅಜ್ಜ ಓಡು ನೀರು ಕುಡಿತಾರೆ.
ಕೆಲಸವಿಲ್ಲದ ಕೆಲಸ ನನಗೆ ಕೊಟ್ಟಿದ್ದಾರೆ.
ದನಕರು ಕುರಿಕೋಳಿಗಳೆಲ್ಲ ನೀರಿಗೆ ಬಂದಿವೆ.
ಬಂದೇ ಬಂದವು ನೋಡು ನೀ ನಿಂತಿರುವೆ.
ಕೆರೆಯ ಮೇಲೆ ನೀಲಿ ನೀಲಿ ಹಕ್ಕಿಗಳು
ನೀರಿನ ಮೇಲೆ ಅರಿಷಿಣ ಬಣ್ಣದ ಚಿಟ್ಟೆಗಳು
ಅಜ್ಜ ಅಜ್ಜ ಅವುಗಳ ಕುತ್ತಿಗೆ ಮುರಿಬೇಡ.
ಅಜ್ಜ ಅಜ್ಜ ಅವುಗಳ ರೆಕ್ಕೆ ಮುರಿಬೇಡ.
ಕಾಯು ಕಾಯು ಕಾಯುತ್ತಿರುವನು ಅಜ್ಜ ಕೆರೆಯನ್ನು
ಹನಿ ಹನಿ ನೀರಿಗಾಗಿ ಬಾಯ್ ಬಿಡುತಿರುವನು.

(ಪ್ರಾಣಿ ಪಕ್ಷಿಗಳನ್ನು ಓಡಿಸುವುದರಲ್ಲಿ ಅಜ್ಜ ಸುಸ್ತಾಗುತ್ತಾನೆ. ನೀರಡಿಕೆ ಯಿಂದ ತತ್ತರಿಸಿದ್ದಾನೆ. ಅಷ್ಟರಲ್ಲಿ ನೀರು ತರಲು ಹೋದ ಹೆಂಗಳೆಯರು ಬರುತ್ತಾರೆ. ನೀರಡಿಸಿದ ಅಜ್ಜ ಅವರ ಮುಂದೆ ದೈನ್ಯನಾಗಿ ನಿಲ್ಲುತ್ತಾನೆ. ಒಂದು ಹೆಣ್ಣು ಮಗಳು ನೀರು ಹಾಕುತ್ತಾಳೆ. ಬೊಗಸೆಯಿಂದ ಅಜ್ಜ ನಿರು

ಕುಡಿಯುತ್ತಾನೆ. ಅವನಲ್ಲಿ ಹುರುಪು ಮೂಡುತ್ತದೆ. ಹೆಣ್ಣು ಮಕ್ಕಳು ಅವನನ್ನು ನೋಡಿ ಮರಗುತ್ತಾರೆ. ಮುಂದೆ ಹೋಗುತ್ತಾರೆ)

(ಒಂದು ಕಡೆ ಕೆಲವು ಜನ ಸೇರಿ ಮಾತಾಡುತ್ತಿದ್ದಾರೆ. ಕೆಲವರು ಅನಂತರ ಬಂದು ಅವರ ಮಾತುಗಳನ್ನು ಆಲಿಸುತ್ತ ನಿಲ್ಲುತ್ತಾರೆ.)

: ಈ ಸ್ವಾಮಿ ಬರೋದಾದ್ರೂ ಯಾವಾಗ ?

: ಬರ್‍ತಾನಲ್ಲ ?

: ಸ್ವಾಮಿಗಳಿಗೆ ಒಂದು ಗುಟುಕು ನೀರು ಬೇಕಾಗಿತ್ತು. ತೋಡಿದ್ರು ಕೆರೆ. ಈಗ ಹಂಡೆ ತುಂಬ ನೀರು ಯಾರು ಕುಡಿತಾರೆ ?

: ಆದರೆ ಸ್ವಾಮಿಗಳು ಮೊದಲು ನೀರು ಕುಡೀಬೇಕಲ್ಲ ?

: ಕೆರೆ ತೋಡಿದವರು ನಾವು. ಮತ್ತೆ

: ನೀರು ಕುಡಿದಿದ್ದಾದರೆ ತಲೆ ಕೆಳಗು ಕಾಲು ಮೇಲೆ.

: ಇದೆಲ್ಲ ಈ ಅಂಕುಶನಿಂದಾಗಿ.

: ನಾವೆಲ್ಲ ಅವರ ಮಾತು ಪಾಲಿಸ್‌ಬೇಕು ಅಂತ ನಿರ್ಣಯ ವಾಗಿದೆಯಲ್ಲ. ಸ್ವಾಮಿಗಳಿಗಾಗಿ, ಸ್ವಾಮಿ ಚೈತನ್ಯಕುಮಾರರಿಗಾಗಿ.

: ಧನಿಗಳು ಇನ್ನೂ ಬಂದಿಲ್ಲ. ನಾಯಿ ಬೊಗಳ್ತಾ ಇದೆ.

: ಅವರನ್ನು ಈ ರೀತಿ ನಿಂದಿಸುವುದು ಸರಿಯಲ್ಲ.

: ಯಾಕೆ ನಿಂದಿಸಬಾರದು. ಮೊದಲ ದಿನವೇ ಅಜ್ಜಯ್ಯ ಕಾಲು ಹಿಡಿಯಲು ಹೋದರೆ ಆತ ಅಜ್ಜನನ್ನೆ ಒದ್ದು ತಳ್ಳಿದನಲ್ಲ ?

: ಏನಾದ್ರೂ ಒಳ್ಳೆಯದಾಗೋದಿದ್ರೆ ಒದೆ ತಿನ್ನಲೇಬೇಕಲ್ಲ. ಅದು ಜಗತ್ತಿನ ನಿಯಮವೇ ಆಗಿದೆ.

: ಸ್ವಾಮಿಗಳು ಬಂದ ಬಳಿಕ ಇವೆಲ್ಲ ಸಂಗತಿ ಅವರ ಕಿವಿ ಮೇಲೆ ಹಾಕಬೇಕು.

: ಅದು ಚಾಡಿಯ ಮಾತಾದೀತು.

: ಆಗಲಿ ಬಿಡು. ಅದು ಸತ್ಯವಲ್ಲವೇ ?

: ಸತ್ಯವಾದರೆ ನಾವು ಸ್ವಾಮಿಗಳಿಗೆ ಬೇರೆ ಹೇಳಬೇಕಾದ ಅಗತ್ಯ ವೇನು ? ಸ್ವಾಮಿ ಅಂತರ್ಯಾಮಿ ಆಗಿರುತ್ತಾರೆ. ಅವರಿಗೆ ಹೇಳೋ ಮೊದಲೇ ಎಲ್ಲಾ ಗೊತ್ತಾಗಿ ಬಿಡುತ್ತೆ.

: ಸ್ವಾಮಿಗಳಿಗೆ ಅಂಕುಶನ ಬಗ್ಗೆ ಹೇಳಿ ಪ್ರಯೋಜನವೇನು ? ಅವನಂತೂ ಸ್ವಾಮಿಗಳ ಶಿಷ್ಯನೂ ಅಲ್ಲ ಭಕ್ತನೂ ಅಲ್ಲ. ಅವರನ್ನು ಹತ್ತಿರದಿಂದಲೋ ದೂರದಿಂದಲೋ ಬಲ್ಲವನು ಅಷ್ಟೆ.

: ಇಂಥ ಜನರನ್ನು ನಂಬೋದು ಅಂದ್ರೆ ನಮ್ಮ ಕಾಲ್ ಮೇಲೆ ನಾವೇ ಕಲ್ಲು ಹಾಕಿಕೊಂಡಂತೆ.

: ನಾವು ಸೂತ್ರದ ಗೊಂಬೆಗಳಾಗಿದ್ದೇವೆ.

: ಸ್ವಾಮಿ ಬಂದಾಗ ನಮ್ಮ ಬಿಡುಗಡೆ.

: ಗೊಂಬೆಗಳಿಗೆಲ್ಲಿಯ ಬಿಡುಗಡೆ. ಗೊಂಬೆಗಳಿಗೆ ಜೈಲೂ ಒಂದೇ, ಬಯಲೂ ಒಂದೇ.

: ಸ್ವಾಮಿ ಊರಿಗೆ ಬಂದಿದ್ದಾರಂತ ಸುದ್ದಿ ಕೇಳೋದಕ್ಕೆ ಕಿವಿ ನಿಮಿರಿ ನಿಂತಿವೆ. ಅಷ್ಟರಲ್ಲಿ ತಂದೆ - ಮಗನಂತೆ ಶೋಭಿಸುವ ಇಬ್ಬರು ಬರುತ್ತಾರೆ. ಹರಟೆ ಹೊಡೆಯುವ ಉತ್ಸಾಹದಿಂದ ಅವರನ್ನು ಸ್ವಾಗತಿಸುತ್ತಾರೆ.

: ಏನೋ ಒಳ್ಳೆಯ ಸುದ್ದೀನೇ ಇರಬೇಕು. ತಂದೆ-ಮಗ ನಗುನಗುತ ಬರ್ತಿದ್ದಾರೆ.

ತಂದೆ : ಒಳ್ಳೆಯ ಸುದ್ದಿಯೇ.

(ಮಗ ನಾಚುತ್ತಾನೆ)

ನೀನು ಹೇಳ್ತಿಯೋ ನಾನೇ ಹೇಳಿ ಬಿಡಲೊ.

(ಮಗ ಮತ್ತೆ ನಾಚುತ್ತಾನೆ)

ತಂದೆ : ನನ್ನ ಮಗನಿಗೆ ನೆಂಟಸ್ತಿಕೆ ಬಂದಿದೆ ಹೊರಗಿನ ಊರಿನಿಂದ...

: ಅದರಲ್ಲಿ ಆಶ್ಚರ್ಯವೇನು ?

: ಕರು ಹೋರಿಯಾಯ್ತು ಅಂದರೆ ರೈತನ ಕಣ್ಣು ಅದರ ಮೇಲೆ ಬೀಳೋದು ಅಸಹಜವೇನಲ್ಲ.

: ಮಗನಿಗೆ ನೆಂಟಸ್ತಿಕೆ ಬಂದಿದೆಯಂತೆ ! ಹಸುವಿನ ಹೊಟ್ಟೆಯಲ್ಲಿ ಕೋಣ ಹುಟ್ಟಿದಂತೆ ಆಶ್ಚರ್ಯದಿಂದ ಹೇಳ್ತಿದ್ದಾನೆ.

(ಎಲ್ಲರೂ ತಂದೆ-ಮಗನ ಗೇಲಿ ಮಾಡಿ ನಗುತ್ತಾರೆ. ಮಗ ನಾಚಿಕೆಯಿಂದ ನೀರಾಗುತ್ತಾನೆ. ತಂದೆ ಜನಗಳ ಮೇಲೆ ರೇಗುತ್ತಾನೆ)

ತಂದೆ : ನತದೃಷ್ಟರೇ. ನನ್ನ ಮತ್ತು ನನ್ನ ಮಗನ ಗೇಲಿ ಮಾಡ್ತೀರಾ ? ಬೇರೆ ಊರಿನಿಂದ ನೆಂಟಸ್ತಿಕೆ ಬಂದಿದೆ ಅಂದ್ರ ಅದು ಆಶ್ಚರ್ಯ ಅಂತ ನಿಮಗೆ ಅನ್ನಿಸುತ್ತದೆಯೆ ? ಹಿಂದೆ ಈ ಊರಿನ ಯಾವ ಮಗನಿಗಾದರೂ ಬೇರೆ ಊರಿಂದ ನೆಂಟಸ್ತಿಕೆ ಬಂದಿತ್ತೇನು-ಯಾರಿಗೂ ಬರಲಿಲ್ಲ. ಮದುಮಕ್ಕಳು, ತಂದೆ - ತಾಯಿಗಳು ಹಿತೈಷಿಗಳು ಊರೂರಿಗೆ ಓಡಾಡಿ ಸೆರಗು ಒಡ್ಡಿ ಭಿಕ್ಷೆ ಬೇಡಿ ನೆಂಟಸ್ತನ ಬೆಳೆಸಿದ್ದಾರೆ. ಈ ಊರಿಗೆ ಯಾರೂ ತಾನಾಗಿಯೇ ತಮ್ಮ ಮಗಳು ಕೊಡಲು ಮುಂದೆ ಬರುವುದಿಲ್ಲ. ಮೊಟ್ಟ ಮೊದಲ ಬಾರಿ ನನ್ನ ಮಗನ ಪಾಲಿಗೆ ಈ ಶುಭಯೋಗ ಬಂದಿದೆ. ಇದು ನನ್ನ ಮುಖ ನೋಡಿ ಆಗಿದ್ದಲ್ಲ. ಮಗನ ಪರಾಕ್ರಮ ನೋಡಿಯೂ ಆಗಿದ್ದಲ್ಲ.

ಮುಖ್ಯವಾಗಿ ನಮ್ಮೂರಿನ ಕೆರೆ ನೋಡಿ ಅವರು ಮುಂದೆ ಬಂದಿದ್ದಾರೆ.

(ಕ್ರಮೇಣ ಜನಗಳಿಗೆ ತಿಳಿವಳಿಕೆ ಮೂಡುತ್ತದೆ. ಅವರೂ ತಂದೆ-ಮಗನ ಖುಷಿಯಲ್ಲಿ ಪಾಲುಗೊಳ್ಳುತ್ತಾರೆ)

: ಇದೂ ನಿಜವೇ. ನೀರಿನ ಸಮಸ್ಯೆಯಿಂದ ಬೇರೆ ಊರಿನ ಹುಡುಗಿಯನ್ನು ಈ ಊರಿಗೆ ಕೊಡಲು ಹಿಂದೇಟು ಹಾಕುತ್ತಿದ್ದರು.

: ಈಗ ನಮ್ಮ ಮಕ್ಕಳಿಗೆ ಹೊರ ಊರಿನಿಂದ ನೆಂಟಸ್ತಿಕೆಗಳು ಬರುತ್ತದೆ.

: ಮಗಳ ಬಗ್ಗೆ ಮೆಟ್ಟು ಸವೆಸಲೇಬೇಕು. ಇನ್ನು ಮುಂದೆ ಮಗನ ಬಗ್ಗೆ ಸವೆಸುವ ಅಗತ್ಯವಿಲ್ಲ.

: ನಿನ್ನ ಮಗನ ಮದುವೆ ಸಡಗರದಿಂದ ಮಾಡೋಣ.

: ಮದುವೆಗೆ ಬರುವ ಮಂದಿಗೆ ನಮ್ಮೂರಿಗೆ ಕೆರೆ ತೋರಿಸು. ನೋಡಿ ಸಂತೋಷ ಪಡಲಿ.

: ಕೇವಲ ನೋಡಿ.

: ಅಂದರೆ ?

: ನೀರಿಗೆ ಕೈಹಚ್ಚಲು ಸಿಗಲಿಕ್ಕಿಲ್ಲ. ದೂರದಿಂದ್ಲೆ ಕೆರೆ ನೋಡೋದು ಮತ್ತು ನೆಂಟಸ್ತಿಕೆ ಬೆಳೆಸೋದು.

(ಎಲ್ಲರೂ ನಗುತ್ತಾರೆ. ತಂದೆ ಮತ್ತು ಮಗ ಅಸ್ವಸ್ಥರಾಗುತ್ತಾರೆ. ಅಷ್ಟರಲ್ಲಿ ದೂರದಿಂದ ಅಂಕುಶ ಬರುತ್ತಾನೆ. ಜನ ಅವನನ್ನು ಸುತ್ತುವರಿಯುತ್ತಾರೆ. ಅವನು ಎಲ್ಲರನ್ನೂ ಒಮ್ಮೆ ಸೂಕ್ಷ್ಮವಾಗಿ ನೋಡುತ್ತಾನೆ. ಜನರಲ್ಲಿದ್ದ ಉತ್ಸಾಹ ಕಡಮೆಯಾದಂತೆ ಅವನಿಗೆ ಅನ್ನಿಸುತ್ತದೆ)

ಅಂಕುಶ : ನಾನೇನು ಡೊಂಬರಾಟ ತಗೊಂಡ್ ಬಂದಿದ್ದೇನೆಯೆ ಅಥವಾ ಕೆಲಸದ ಮೊಕಾದಮ್‌ನಾಗಿ ವಾರದ ಕೆಲಸ ಹಂಚೋದಕ್ಕೆ ಬಂದಿದ್ದೇನೆಯೆ ?

(ಒಬ್ಬ ಮಾತಾಡುವ ಧೈರ್ಯ ಮಾಡುತ್ತಾನೆ)

ಕೆರೆ ತೋಡಿದ್ದಾಯ್ತು. ಕೆರೆಗೆ ನೀರೂ ಬಂತು. ಕೆರೆಯ ಕಾವಲು ನಮ್ಮ ಅಜ್ಜಯ್ಯ ಚೆನ್ನಾಗಿ ಮಾಡ್ತಿದ್ದಾರೆ.

ಅಂಕುಶ : ಮುಂದೆ...

: ಕೆರೆಯ ನೀರಿಗೆ ಪಾಚಿ ಕಟ್ಟುತ್ತಾ ಇದೆ. ನೀಲಿ ನೀರು ಹಸುರಾಗ ಬಹುದು.

: ಆ ನೀರಿನ ಉಪಯೋಗ ಆದಷ್ಟು ಬೇಗ ಆಗಬೇಕು.

ಅಂಕುಶ : ನೀರಿನ ಉಪಯೋಗ ? ಆಗುತ್ತೆ...ಅಗತ್ಯ ಆಗುತ್ತೆ.

: ಅದಕ್ಕೂ ಮೊದಲು ಸ್ವಾಮಿಗಳು ಬರಬೇಕಲ್ಲ.

ಅಂಕುಶ : (ಮುದ್ದಾಂ) ಸ್ವಾಮಿ ? ಯಾವ ಸ್ವಾಮಿ ?

: ಸ್ವಾಮಿ.....ಸ್ವಾಮಿ ಚೈತನ್ಯಕುಮಾರ.

ಅಂಕುಶ : ಆಂ...ಆಂ...ಸ್ವಾಮಿ ಚೈತನ್ಯಕುಮಾರರು. ಅವರು ಇಲ್ಲಿ ಬರುವ ಘೋಷಣೆ ಮಾಡಿದ್ದಾರೆ. ಅವರು ಬಂದೇ ಬರ್ತಾರೆ. ನಿಮಗೆ ಅವರು ಬೇಗ ಬರುವುದು ಬೇಕಿತ್ತೆ ?

: ಬೇಗ ಅಂದ್ರೆ ?

: ಸ್ವಾಮಿಗಳ ದರ್ಶನ ಆದಷ್ಟು ಬೇಗ ಆಗುವುದು ಒಳ್ಳೆಯದಲ್ಲವೆ ?

ಅಂಕುಶ : ನೀವು ನಿಮ್ಮ ಬಗ್ಗೆನೆ ಯೋಚಿಸುತ್ತೀರಿ. ಸ್ವಾಮಿಗಳ ಬಗ್ಗೆ ಅಲ್ಲ.

: ಯಾಕೆ ಹಾಗಂತೀರ? ಅವರಿಗಾಗಿ ಇಷ್ಟು ದೊಡ್ಡ ಕೆರೆ ತೋಡಿಲ್ಲವೆ?

ಅಂಕುಶ : (ಬೇಸರದಿಂದ) ಕೆರೆ...ಕೆರೆ...ಕೆರೆ. ಒಂದು ಕೆರೆ ತೋಡಿದ್ರೆ ಮುಗಿದು ಹೋಯ್ತೆ ? ಊರಿನ ಮುಂಬಾಗಿಲಿಗೆ ಬಂದು ಸ್ವಾಮಿಗಳು ನಿಂತರೆ ಅವರ ಪೂಜೆ ಹೇಗೆ ಮಾಡ್ತೀರ ?

: ಪೂಜೆ ? ಹೂವಿನಿಂದ ಮಾಡಬೇಕಲ್ವೆ ?

ಅಂಕುಶ : ಪೂಜೆಗಾಗಿ ಹೂವು ಸ್ವರ್ಗದಿಂದ ಉದುರುವುದಿಲ್ಲ.

: ಪೂಜೆಗಾಗಿ ಹೂವು ತರುವುದು ದೊಡ್ಡ ಕಾರ್ಯವಲ್ಲ. ಪಕ್ಕದ ಊರಿನಲ್ಲಿ ಜನರು ಹೂವಿನ ತೋಟಗಳನ್ನಿಟ್ಟಿದ್ದಾರೆ. ನಮ್ಮ ಮಕ್ಕಳು ಮುಸ್ಸಂಜೆಗೆ ಹೋಗಿ ಅನ್ಯರ ತೋಟದಲ್ಲಿದ್ದ ಹೂಗಳನ್ನು ಕಿತ್ಕೊಂಡು ಬರ್ತಾರೆ. ಇಲ್ಲದಿದ್ರೆ ಮುಂಜಾನೆದ್ದು ಹೋಗಿ ಟೊಂಗೆ ಸಹಿತ ಹೂವು ಕಿತ್ತು ತಂದು ರಾಶಿ ಹಾಕ್ತಾರೆ. ಹೂವಿನ ಚಿಂತೆ ನಿಮಗೆ ಬೇಡ. ಸ್ವಾಮಿಗಳ ಯಾವ ದಿನ ಬರ್ತಾರೆ ಯಾವ ಹೊತ್ತಿಗೆ ಬರ್ತಾರೆ ಹೇಳಿ. ಸ್ವಾಮಿಗಳನ್ನು ಮೈತುಂಬ ಹೂವಿನಿಂದ ಸಿಂಗರಿಸುವುದು ನಮ್ಮ ಚಿಳ್ಳೆಪಿಳ್ಳೆಗಳ ಕೆಲಸ.

ಅಂಕುಶ : ಅಂದರೆ ? ಹೂವು ಕದ್ದು ತಂದು ನೀವು ಸ್ವಾಮಿಗಳ ಪೂಜೆ ಮಾಡ್ತೀರಾ ?

: ಕದ್ದು ತರೋದು ಅಂದ್ರೆ ಯಾರಿಗೂ ಗೊತ್ತಾಗದಂತೆ ತರೋದು.

ಅಂಕುಶ : ಎಲ್ಲರಿಗೂ ಮೋಸ ಮಾಡಬಹುದು. ಸ್ವಾಮಿಗಳಿಗೆ ಹೇಗೆ ಮೋಸ ಮಾಡ್ತೀರಿ ? ಹೂವಿನ ಎಸಳು ನೋಡಿ ಸ್ವಾಮಿಗಳು ಹೇಳ್ತಾರೆ.ಯಾರ ಹಿತ್ತಿಲಿನಿಂದ ತಂದಿದ್ದು ಅಂತ.

: ಹಂಗಾದ್ರೆ ಒಳ್ಳೆ ಪೇಚಿನಲ್ಲಿ ಸಿಕ್ಕಿಕೊಂಡಂತಾಯ್ತಲ್ಲ. ನಮ್ಮೂರಿನಲ್ಲಿ ಹಾಗೆ ಗಿಡ-ಮರಗಳಿವೆ ಆದರೆ ಹೂಗಿಡಗಳು ಮಾತ್ರ ಇಲ್ಲ.

ಅಂಕುಶ : ಕಾರಣ ಅವುಗಳನ್ನು ನೀರು ಹಾಕಿ ಬೆಳೆಸಬೇಕಲ್ಲ ?

: (ನಿರ್ಲಜ್ಜನಾಗಿ ನಗುತ್ತ) ಅದೂ ನಿಜವೇ !

ಅಂಕುಶ : ಸ್ವಾಮಿಗಳು ಊರಲ್ಲಿ ಕಾಲಿಟ್ಟು ಮೊದಲು ಏಳು ಹೆಜ್ಜೆ ನೆಲದ ಮೇಲೆ ನಡೆಯುತ್ತಾರೆ.

: ಮತ್ತೆ....?

ಅಂಕುಶ : ಆಮೇಲೆ ಅವರು ನಾಲ್ಕು ಅಂಗುಲ ಮೇಲೆ ನಡೀತಾರೋ ಅಥವಾ ಹವೆಯಲ್ಲಿ ನಡೀತಾರೊ ಹೇಳೋಕ್ಕೆ ಬರೋದಿಲ್ಲ. ಮೊದಲಿನ ಏಳು ಹೆಜ್ಜೆಗಳು ಮಹತ್ವದ್ದು. ಸ್ವಾಮಿಗಳು ಕಾಲಿಟ್ಟಲ್ಲಿ ಕಲ್ಲು-ಜಲ್ಲಿ ಏನೂ ಕಾಲಿಗೆ ಅಂಟಬಾರದು. ಎಲ್ಲಿಯಾದರೂ ಅಪ್ಪಿತಪ್ಪಿ ಸ್ವಾಮಿಗಳ ಕಾಲಿಗೇನಾದರೂ ಅಂಟಿದರೆ ಮುಂದಾಗುವ ಅನರ್ಥ ಹೇಳತೀರದು.

: ಏನಾಗಬಹುದು ?

ಅಂಕುಶ : ರಕ್ತದ ಹೊಳೆಗಳು ಹರಿಯಬಹುದು. ನಿಮಗೆ ಅದು ನೋಡಿ ಆಶ್ಚರ್ಯವಾಗಬಹುದು. ಇಷ್ಟೊಂದು ಚಿಕ್ಕದೇಹದಲ್ಲಿ ರಕ್ತದ ಹೊಳೆ ಹರಿದುದು ನೋಡಿ ನಿಮಗೆ ಸೋಜಿಗವಾಗಬಹುದು. ಇಂಥ ಸೋಜಿಗ ನೋಡಲು ನೀವು ಆಶೆಪಡಬೇಡಿ.

: ಸ್ವಾಮಿಗಳು ಕಾಲಿಡುವ ನೆಲವನ್ನು ಸ್ವಚ್ಛ ಮಾಡಿಬಿಡ್ತೇವೆ. ಬೇಕಾದರೆ ಸಾರಿಸಿ ಇಡ್ತೇವಿ.

ಅಂಕುಶ : ನೀವು ಸ್ವಚ್ಛ ಮಾಡಿದ ನೆಲದ ಮೇಲೆ ಸ್ವಾಮಿಗಳು ಕಾಲಿಡ್ತಾರೆ ಅಂತ ಹೇಗೆ ಹೇಳ್ತೀರ ?

: ಮತ್ತೆ ?

ಅಂಕುಶ : ಸ್ವಾಮಿಗಳು ಕಾಲಿಡುವ ಸ್ಥಳದಲ್ಲಿ ಹೂವಿನ ರಾಶಿ ಹಾಕುವುದು. ಇಂಥ ರಾಶಿ ಕನಿಷ್ಟ ಏಳುಕಡೆ ಹಾಕಬೇಕು.

: ಅಂದರೆ ತುಂಬ ಹೂವು ಬೇಕಾಗಬಹುದು.

ಅಂಕುಶ : ಮತ್ತೆ...ಹೂವುಗಳು ಬೇರೆ ಊರಿಂದಾಗಲಿಕ್ಕಿಲ್ಲ. ಸ್ವಾಮಿಗಳು ಬಂದು ಇಳಿದ ಊರಿನ ಹೂವುಗಳೇ ಆಗಬೇಕು. ಆ ಹೂಗಳಿಂದಲೇ ಅವರ ಪೂಜೆ ನಡೀಬೇಕು.

(ಜನ ಚಿಂತಾಗ್ರಸ್ತರಾಗುತ್ತಾರೆ.)

ಅಂಕುಶ : ಮತ್ತೆ ಸ್ವಾಮಿಗಳ ಏನ್ ತಿಂತಾರೆ ? ಮನೆಗೆ ಹೊಂದಿಕೊಂಡು ನೆಂಟರಿರಬೇಕು. ಆದರೆ ಇಲ್ಲಿ ಹಾಗಲ್ಲ. ಸ್ವಾಮಿಗಳಿಗೆ ಸರಿ ಹೋಗುವಂತಹ ಆಹಾರ ಇರ್‌ಬೇಕು.

: ಸ್ವಾಮಿಗಳ ಊಟ-ತಿಂಡಿ ಯಾವ ಬಗೆಯದು ?

ಅಂಕುಶ : ಸ್ವಾಮಿಗಳು ಸಂಪೂರ್ಣ ಫಲಾಹಾರಿಗಳು. ಅವರು ಊಟ ಮಾಡೋದಿಲ್ಲ.

(ಜನಕ್ಕೆ ಹಿತವೆನಿಸುತ್ತದೆ.)

ಅಂಕುಶ : ಫಲಾಹಾರದ ಸಮಯ ತಟ್ಟೆಯಲ್ಲಿ ಐದು ತರದ ಹಣ್ಣುಗಳಿಡಬೇಕು. ಬೆಳಿಗ್ಗೆ ತಟ್ಟೆಯಲ್ಲಿಟ್ಟಂತಹ ಹಣ್ಣುಗಳು ಮಧ್ಯಾಹ್ನ ತಟ್ಟೆಯಲ್ಲಿಡಕೂಡದು. ಮಧ್ಯಾಹ್ನ ಇಟ್ಟಂತಹ ಹಣ್ಣು ರಾತ್ರಿಗಿಡಕೂಡದು.

: ಇದೆಲ್ಲ ತುಂಬಾನೇ ಆಯ್ತು.

ಅಂಕುಶ : ಸ್ವಾಮಿಗಳೆಂದ್ರೆ ಪುಕ್ಕಟೆ ಸಿಗೋದಿಲ್ಲ. ಅವರು ಹೂವಿನ ಬಗ್ಗೆ ಇಟ್ಟ ಕಾಳಜಿ ಹಣ್ಣುಗಳ ಬಗ್ಗೆನೂ ಇಡ್ತಾರೆ.

: ಅಂದರೆ ?

ಅಂಕುಶ : ಅಂದರೆ ಸ್ವಾಮಿ ಯಾವ ಊರಲ್ಲಿರ್ತಾರೋ ಅದೇ ಊರಿನ ಹಣ್ಣು ತಿಂತಾರೆ. ಬೇರೆ ಊರಿಂದ ತಂದ, ಖರೀದಿಗೆ ತಂದ ಹಣ್ಣು ಮುಟ್ಟಲಿಕ್ಕಿಲ್ಲ.

: ಅಂದರೆ ಇವೆಲ್ಲ ನಮ್ಮೂರಿನಲ್ಲಿ ಬೆಳೀಬೇಕಾಯ್ತು.

ಅಂಕುಶ : ಹೌದು. ಇದು ಕಷ್ಟಪಟ್ಟ ಹೊರತು ಆಗುವ ಕೆಲಸವಲ್ಲ.

: ಹಾಗೆ ನಾವು ಕಷ್ಟ ಪಡೋಕ್ಕೆ ಹಿಂದೇಟು ಹಾಕೋದಿಲ್ಲ.

: ಇಷ್ಟು ದೊಡ್ಡ ಕೆರೆ ತೋಡಲಿಲ್ಲವೆ ?

: ಇಷ್ಟೆಲ್ಲ ಮಾಡೋಕ್ಕೆ ತುಂಬಾ ಸಮಯ ಬೇಕಾಗ್‌ಬಹುದು. ಈ ಮಧ್ಯೆ ಸ್ವಾಮಿಗಳು ಬಂದು ಬಿಟ್ರೆ ?

ಅಂಕುಶ : ಹೇಗೆ ಬರಲು ಸಾಧ್ಯ. ಹೂವಿನ ಪರಿಮಳ ಸ್ವಾಮಿಗಳ ಮೂಗಿಗೆ ಬಡಿಯಬೇಕು. ಘೋಷಣೆ ಮಾಡಿಯೂ ಸ್ವಾಮಿಗಳು ಈ ತನಕ ಬರದಿರುವ ಕಾರಣ ಇದೇ ಇರಬಹುದು. ಅವರ ಪೂಜೆಯ ಮತ್ತು ಫಲಾಹಾರದ ಸಿದ್ಧತೆ ಇನ್ನೂ ಆಗಿಲ್ಲ.

ಅಂಕುಶ : ಕೆರೆಯ ನೀರಿನ ಮೇಲೆ ಈಗ ಪಾಚಿ ಕಟ್ಟಕೂಡದು.

(ಅಷ್ಟರಲ್ಲಿ ಅಜ್ಜಯ್ಯ ಬರುತ್ತಾನೆ. ಅವನ ಕೈಯಲ್ಲಿ ಕೋಲು ಇದೆ. ಅಜ್ಜಯ್ಯ ಚಿಂತಾಗ್ರಸ್ತನಿದ್ದಂತೆ ತೋರುತ್ತದೆ.)

: ಅಜ್ಜಯ್ಯ.....ಕೆರೆಯ ದಂಡೆಯ ಮೇಲೆ ನಾವೀಗ ಗಿಡಮರಗಳನ್ನು ನೆಡೋಣ ಹೂವು-ಹಣ್ಣುಗಳ ಗಿಡಗಳು.

: ಬೇರೆ ಬೇರೆ ತರದ ಹೂವಿನ - ಹಣ್ಣಿನ ಬೀಜಗಳನ್ನು ನಾವು ಸಂಗ್ರಹಿಸಿ ತರ್ತೀವಿ.

(ಅಜ್ಜಯ್ಯ ತಲೆದೂಗುತ್ತಾನೆ)

ಅಂಕುಶ : ಒಂದ್ ಮಾತು ನೆನಪಿಡಿ. ಕೆರೆಯ ನೀರು ಗಿಡಗಳಿಗೆ ಮಾತ್ರ ಉಪಯೋಗಿಸೋದು. ನಿಮ್ಮ ನೀರಡಿಕೆಗೆ ನೀವು ಒಂದು ಹನಿ ನೀರು ನಾಲಿಗೆಯ ಮೇಲಿಟ್ಟರೂ ನಿಮಗೆ ಸ್ವಾಮಿಗಳ ಶಾಪ ತಟ್ಟದೆ ಇರೋಲ್ಲ.

: ಕೆರೆ ಕಾಯುವ ಅಜ್ಜಯ್ಯನ ಸ್ಥಿತಿ ನೋಡಿದ್ದೀವಲ್ಲ.

ಅಂಕುಶ : ಹಾಗಿದ್ದರೆ ತನ್ನಿ ಹಾರೆ ಗುದ್ದಲಿ, ಅಗೆಯಿರಿ ನೆಲ. ಕುಂಡ-ಹೊಂಡಗಳನ್ನು ಮಾಡಿ. ಬೀಜ ಬಿತ್ತಿ....ಸಸಿ ಮಾಡಿ...ನೆಡಿರಿ...ಕೆಲಸ ಶುರು ಮಾಡಿ. ಒಂದೇ ಸ್ವರ ಒಂದೇ ದನಿ ಹಚ್ಚಿ.

ನಿಮ್ಮ ಆತ್ಮವಿಶ್ವಾಸ ನಿಮ್ಮಲ್ಲಿ ಕಳೆದುಹೋಗಿತ್ತು. ಈಗ ಅದು ನಿಮಗೆ ಸಿಕ್ಕಿದೆ.

ಮನಸ್ಸು ಮತ್ತು ಶ್ರಮಗಳನ್ನು ಒಂದಾಗಿಸುವ ಸ್ವರ. ಕಷ್ಟಗಳಿಗೆ ವೇಗ ನೀಡುವ ಸ್ವರ. ನನ್ನ ಮತ್ತು ನಿಮ್ಮ ಒಂದಾದ ಸ್ವರ.

(ಕೆರೆ ತೋಡುವಾಗ ಒಂದೇ ಸ್ವರ ಒಂದೇ ದನಿಯಲ್ಲಿ ಕೆಲಸ ಮಾಡುತ್ತಿದ್ದಂತೆ ಅದೇ ಸ್ವರ ಮತ್ತೆ ಮರುದನಿಸಲು ಆರಂಭವಾಗುತ್ತದೆ. ಹಾರೆ, ಗುದ್ದಲಿ, ಪಿಕಾಸುಗಳ ಸದ್ದು, ಗಿಡ ನೆಡುವ ಕಾರ್ಯ, ಗಿಡಗಳಿಗೆ ನೀರುಣಿಸುವ ಕಾರ್ಯ ಕೆಲಸ ನಡೆಯುತ್ತಿರುವಾಗ ಅಜ್ಜ ಎಲ್ಲರ ಮೇಲೂ ಕಣ್ಣಿಡುತ್ತಾನೆ. ನೀರು ಯಾರೂ ಕುಡಿಯದಂತೆ ಕಟಾಕ್ಷ ಇಡುತ್ತಾನೆ. ಕೆಲಸ ಆರಂಭವಾಯಿತು ಎಂದು ಗೊತ್ತಾದ ಕೂಡಲೆ ಅಂಕುಶ ಅಲ್ಲಿಂದ ಮೆಲ್ಲಗೆ ಕಾಲ್ತೆಗೆಯುತ್ತಾನೆ. ಕೆಲಸ ತುಂಬ ದಿನಗಳು ನಡೆಯುತ್ತಿದೆಯೆಂಬುದನ್ನು ಕತ್ತಲೆ - ಬೆಳಕಿನ ಸಂಯೋಜನೆಯಿಂದ ತೋರಿಸಬೇಕು. ಕೆರೆಯ ದಂಡೆಯ ಮೇಲೆ ಈಗ ಹೂ-ಹಣ್ಣುಗಳ ತೋಪು ನಿಂತಿದೆ)

(ಒಂದು ಕಡೆ ಕೆಲವು ಹೆಂಗಸರು ಕೂತಿದ್ದಾರೆ. ಅವರು ಹೇನು ಹೆಕ್ಕುತ್ತಿದ್ದಾರೆ.)

: ಏನಮ್ಮ ತಲೆಯಲ್ಲಿ ಇಷ್ಟೊಂದು ಹೊಟ್ಟು ?

: ಇವಳಿಗಂತೂ ಜಟೆ ತುಂಬಿಕೊಂಡಿದೆ.

: ಇವಳ ಕೂದಲಿಗಂತೂ ಹೇನುಗಳ ಮೊಟ್ಟೆಗಳ ರಾಶಿಯೇ ಇದೆ.

: ಇವಳ ತಲೆಯಲ್ಲಿ ಹೇನುಗಳ ಹಿಂಡು.

: ನೀರಿಲ್ಲದೆ ದುರವಸ್ಥೆಯಾಗಿದೆ ನಮ್ಮ ತಲೇದು.

: ಈಗ ಮಳೆಯ ದಾರಿ ಕಾಯಬೇಕು.

: ಎಲ್ಲರೂ ಸ್ವಾಮಿಗಳ ದಾರಿ ಕಾಯುತ್ತಿದ್ದಾರೆ.

: ಅವರೇನು ಸೂರ್ಯನೆ ನಿಶ್ಚಿತ ವೇಳೆಗೆ ಬರಲು.

: ಬಂದಾಗಷ್ಟೆ ನಿಜ.

: ಕೆರೆಯ ನೀರಿನಿಂದ ಮಾತ್ರ ಹಣ್ಣು ಹೂವಿನ ತೋಪು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿದೆ.

: ಕೆರೆಯ ನೀರಿನಿಂದಲೋ ? ಬೆವರ ಧಾರೆಯಿಂದಲೊ ?

: ನಾವು ಕೇವಲ ಬೆವರು ಧಾರೆ ಸುರಿಸೋದು ಅಷ್ಟೆ.

: ಇನ್ನು ನಿಮ್ಮ ಬೆವರಿಗೆ ಬರುತ್ತೆ ಘಮಘಮ ಪರಿಮಳ.

: ಥು...ಥೂ...

: ಥುಥೂ ಏನು ಹಿತ್ತಲಲ್ಲಿ ಇನ್ನು ಹೂವು ಅರಳುತ್ತವೆ ಹೂವು !

: ಅಬ್ಬಬ್ಬಾ...ಗಿಡಗಳಂತೂ ಹಿಗ್ಗಿನಿಂದ ಚಿಗುರ್ತಾ ಇವೆ.

: ಹೂ ಮುಡಿಯುವಂಥ ಸುಖ ಬೇರೆಯಿಲ್ಲ.

: ಗಂಡ ದಿನಕ್ಕೊಂದು ಹೂವಿನ ಹಾರ ತಂದು ಕೊಡೋದಾದ್ರೆ ಅವನ ಏಟು ಎಷ್ಟಾದರೂ ತಿನ್ನೊಕ್ಕೆ ನಾನು ಸಿದ್ಧ.

(ಎಲ್ಲರೂ ನಗುತ್ತಾರೆ)

: ಸಾಕು ಇಂಥ ಗಂಡಂದಿರು.

: ಇಂಥ ಗಂಡಧಿರನ್ನು ನಂಬಿಕೊಂಡರೆ ದೇವರೇ ಗತಿ.

: ನಮ್ಮ ಮುದ್ದು ನಾವೇ ಮಾಡೋದು.

: (ಮೆಲ್ಲನೆ) ತೋಪಿನ ಒಂದು ಗಿಡಕ್ಕೆ ಮೊಗ್ಗು ಬಂದಿದೆ.

: ನಿಜವೇ ?

(ಎಲ್ಲರೂ ಹತ್ತಿರ ಬಂದು ಗುಸುಗುಡುತ್ತಾರೆ.)

(ಒಂದೆಡೆ ಕೆಲ ಗಂಡಸರು ಹರಟೆ ಹೊಡೆಯುತ್ತಿದ್ದಾರೆ.)

: ಈ ಬಗೆಯ ಬೀಜಗಳು ಮತ್ತು ಸಸಿಗಳು ಈ ಮಣ್ಣಿನಲ್ಲಿ ಜೀವ ಹಿಡಿದಿರೋದು ನೋಡಿ ಆಶ್ಚರ್ಯವಾಗುತ್ತದೆ.

: ಗಿಡಗಳಂತೂ ಗೃಹಸ್ಥರ ಮನೆಯ ನಾಯಿಗಳಂತೆ ಸೊಕ್ಕಿ ನಿಂತಿವೆ.

: ನನಗನ್ನಿಸುತ್ತೆ ಹತ್ತು ಊರುಗಳ ಗಿಡಗಳೆಲ್ಲ ನಮ್ಮ ಒಂದೇ ತೋಪಿನಲ್ಲಿ ಬೆಳೆದು ನಿಂತಿವೆ.

: ಹತ್ತು ಊರಿನಿಂದ ಬೀಜ ಮತ್ತು ಸಶಿಗಳನ್ನು ತಂದಿದ್ದವೆಂದ್ರೆ ಮತ್ತೇನಾದೀತು ?

: ನಮ್ಮ ಮಣ್ಣಿಗೆ ಶಕ್ತಿ ಇದೆ ನಿಜ.

: ಮಣ್ಣಿನ ಶಕ್ತಿ ಮತ್ತು ಸಾಕಷ್ಟು ನೀರು ಇದ್ದಮೇಲೆ ಇನ್ನೇನು ಬೇಕು ಬೇರುಗಳಿಗೆ ?

: ಈ ದೊಡ್ಡ ಕೆರೆಯ ಮೇಲೆ ಇಂಥ ತೋಪು ಯಾಕೆ ಬೇಕಿತ್ತು ? ಒಂದು ದೊಡ್ಡ ತೋಟವನ್ನೆ ಮಾಡಬಹುದಿತ್ತು.

: ತೋಟ ಒಂದೇ ಏಕೆ ಹೊಲವನ್ನೂ ಮಾಡಬಹುದಿತ್ತು.

: ತೋಟ ಮತ್ತು ಹೊಲ ? ನಮ್ಮೂರಿನಲ್ಲಿ ?

: ಹೌದು. ಸಾಧ್ಯವಿದೆ. ತಿಳ್ಕೊಳ್ಳಿ ನಾವು ನಾವು ತೋಟ ಬೆಳೆಸಿದ್ವಿ, ಹೊಲ ಮಾಡಿದ್ವಿ, ತಿನ್ನೋರು ಯಾರು ?

: ಯಾರು ತಿಂತಾರೆ ಅಂದ್ರೆ ? ನಮ್ಮ ಬಾಯಿಗೇನು ಬೀಗ ಹಾಕಿದ್ದಾರೆಯೆ ? ಯಾರು ಮಾಡುತ್ತಾರೋ ಅವನು ತಿಂತಾನೆ.

: ಈಗ ತಿಂತಾ ಇದ್ದೀವಲ್ಲ ಹಾಗೆ !

: ಅಂದ್ರೆ ?

: ನೀವು ಕೆರೆ ತೋಡಿದ್ರಿ ? ನೀರು ಕುಡೀತೀರಾ ? ಇಲ್ಲ. ನಾಳೆ ತೋಪಿನಲ್ಲಿ ಹೂವು ಅರಳುತ್ತವೆ. ನಾಡಿದ್ದು ಗಿಡಕ್ಕೆ ಹಣ್ಣು ಬಿಡಬಹುದು. ನಿಮಗೆ ಮುಟ್ಟುವ ಅಧಿಕಾರ ಇದೆಯೆ ?

: (ಮೆಲ್ಲಗೆ) ತೋಪಿನಲ್ಲಿಯ ಒಂದು ಗಿಡಕ್ಕೆ ಕಾಯಿ ಬಿಟ್ಟಿದೆ...ಚೆನ್ನಾಗಿ ಬಲಿತು ನಿಂತಿದೆ.

: ಯಾವುದು ?

: ಯಾರಿಗೆ ಗೊತ್ತಾಗುತ್ತೆ ಏನೂಂತ. ಕಾಯಿ ನೋಡಿದ್ರೆ ಬಾಯಲ್ಲಿ ನೀರು ಬರುತ್ತೆ.

: ದರಿದ್ರ ನನ್ಮಗನೆ...ಕಣ್ಣು ಹಾಕಿದ್ರೆ ಪರವಾಯಿಲ್ಲ. ಕೈ-ಗಿಯ್ ಹಚ್ಚಿ ಬಿಟ್ಟಿಯೆ. ನಾಯಿಯಂತೆ ಬಿದ್ದು ಸಾಯ್ತೀರ.

(ಒಂದು ಕಡೆ ಗದ್ದಲ ಕೇಳಿ ಬರುತ್ತದೆ. ಕೆಲವು ಜನ ಒಂದು ಹೆಣ್ಣನ್ನು ಸುತ್ತುವರಿದು ತರುತ್ತಾರೆ. ಅವಳು ಅಂಜಿ ಕಂಗಾಲಾಗಿದ್ದಾಳೆ. ಅವಳ ಮುಡಿಯಲ್ಲಿ ಹೂವು ಇದೆ. ಅವಳು ಜನಗಳ ಗುಂಪಿನಿಂದ ಪಾರಾಗಿ ಹೋಗಲು ಹವಣಿಸುತ್ತಾಳೆ. ಜನ ಅವಳನ್ನು ಹೋಗಲು ಬಿಡುವುದಿಲ್ಲ. ಅಷ್ಟರಲ್ಲಿ ಅಂಕುಶ ಬರುತ್ತಾನೆ)

: (ಅಂಕುಶನಿಗೆ) ಈ ಹೆಂಗಸು ತೋಪಿನಲಿ ಅರಳಿದ ಮೊದಲ ಹೂವು ಕಿತ್ತು ಮುಡಿದುಕೊಂಡಿದ್ದಾಳೆ. ಮೊಟ್ಟ ಮೊದಲನೇ ಹೂವು.

: ಎಲ್ಲರಿಗಿಂತ ಮೊದಲು ಅಜ್ಜಯ್ಯ ನೋಡಿದ್ದಾರೆ.

(ಅಜ್ಜಯ್ಯ ತಲೆ ಕೆಳಗು ಹಾಕುತ್ತಾನೆ)

ಒಬ್ಬವ : (ಮುಂದೆ ಬಂದು) ಅವಳು ನನ್ನ ಹೆಂಡತಿ. ಅವಳಿಗೆ ಹೂವಿನ ಹುಚ್ಚು...ನಾನೇ ಎಲ್ಲಕ್ಕಿಂತ ಹೆಚ್ಚು ಹೂವಿನ ಗಿಡ ತಂದವನು. ಹೂ-ಹಣ್ಣಿನ ಗಿಡಗಳಿಗೆ ನೀರು ಹಾಕಲು ಅವಳೇ ಹೆಚ್ಚು ಮುಂದಾಗುತ್ತಿದ್ದಳು.

ಅಂಕುಶ : ಗಿಡದ ಸಸಿಗಳನ್ನು ಯಾರು ತಂದಿದ್ದಾರೆ. ಯಾರು ನೆಟ್ಟಿದ್ದಾರೆ,

ಯಾರು ನೀರು ಹಾಕಿದ್ದಾರೆ ಅನ್ನೋದು ಇಲ್ಲಿ ಮುಖ್ಯವಲ್ಲ. ಗಿಡದಲ್ಲಿ ಅರಳಿದ ಹೂವು ಕೀಳುವ ಅಧಿಕಾರ ಯಾರಿಗಿದೆ ಇಲ್ಲಿ ? ಅನ್ನೋದೇ ಸಮಸ್ಯೆ.

: ನಿಜ....ನಮಗೆ ಆ ಅಧಿಕಾರವಿಲ್ಲ.

: ಅದೆಲ್ಲ ಸ್ವಾಮಿಗಳ ಪ್ರೇರಣೆಯಿಂದ.

: ನಾವು ಕೇವಲ ಕಷ್ಟ ಪಡೋದು.

: ಇವಳಿಗೇನು ಮಾಡೋದು ?

ಅಂಕುಶ : ಅವಳಿಗೆ ಶಿಕ್ಷೆ ವಿಧಿಸಲು ನಾನು ನಿಮ್ಮ ಯಜಮಾನ ಅಲ್ಲ. ಈ ಹೆಣ್ಣು ಮಗಳ ವೈರಿಯೂ ಅಲ್ಲ.

: ಆದರೂ ಸ್ವಾಮಿಗಳ ಸಲುವಾಗಿ.

: ಯಾರೋ ಒಬ್ಬರು ತಪ್ಪು ಮಾಡಿದರು. ನಾವು ಕಣ್ಣುಮುಚ್ಚಿ ಅದಕ್ಕೆ ಮಾನ್ಯತೆ ಕೊಟ್ಟಿದ್ದೇವೆ ಅಂತಾಗಬಾರದು ಆದ್ದರಿಂದ.

: ಕಾರಣ ನಮಗೆ ಸ್ವಾಮಿಗಳ ಕೃಪೆ ಬೇಕು. ಅವಕೃಪೆ ಬೇಡ.

: ಹೇಳಿ. ಯಾವ ಶಿಕ್ಷೆ ವಿಧಿಸಬೇಕು ಈ ಹೆಣ್ಣುಮಗಳಿಗೆ.

ಅಂಕುಶ : ಸ್ವಾಮಿಗಳ ಪಾದಾರವಿಂದಗಳಲ್ಲಿ ಬೀಳಬೇಕಾದ ಹೂವು ಈ ಹೆಣ್ಣು ಮಗಳು ತಲೆಗೆ ಮುಡಿದುಕೊಂಡಳು. ಈ ಹೂವು ಯಾವ ಕೂದಲುಗಳು ಹಿಡಿದುಕೊಂಡುವೋ ಆ ಕೂದಲುಗಳನ್ನೇ ಕತ್ತರಿಸಿ ಒಗೆಯುವುದು.

(ಆ ಹೆಣ್ಣು ಮಗಳು ಚಿಟ್ಟನೆ ಚೀರುತ್ತಾಳೆ. ಅವಳ ಗಂಡ ಅವಳನ್ನು ಹಿಡಿದು ಕೊಳ್ಳಲು ಮುಂದೆ ಬರುತ್ತಾನೆ. ಜನ ಅವನನ್ನು ತಡೆಯುತ್ತಾರೆ. ಅವರೆಲ್ಲ ಆ ಹೆಣ್ಣು ಮಗಳ ಹಿಂದೆ ಓಡಿ ಹೋಗುತ್ತಾರೆ. ಅಜ್ಜಯ್ಯ ಮತ್ತು ಅಂಕುಶ ಇಬ್ಬರೇ ಉಳಿಯುತ್ತಾರೆ. ಅಜ್ಜಯ್ಯ ಇಷ್ಟು ಹೊತ್ತು ಕೆಳಗಿಟ್ಟುಕೊಂಡ. ಕತ್ತು ಮೇಲೆತ್ತಿ ಅಂಕುಶನನ್ನು ನೋಡುತ್ತಾನೆ. ಕೆಲವು ಹೊತ್ತು ಹೀಗೇ ಸರಿಯುತ್ತದೆ. ಮತ್ತೊಂದು ಕಡೆ ಜನಗಳ ಗದ್ದಲ ಕೇಳಿ ಬರುತ್ತದೆ. ನಾಲ್ಕೈದು ಮಂದಿ ಒಬ್ಬನನ್ನು ಹಿಡಿದು ತರುತ್ತಾರೆ. ಆತ ಬಿಡಿಸಿಕೊಳ್ಳಲು ಯತ್ನಿಸುತ್ತಾನೆ.)

: ಈತ ತೋಪಿನಲ್ಲಿದ್ದ ಒಂದು ಹಣ್ಣು ತಿಂದಿದ್ದಾನೆ.

: ಮೊಟ್ಟ ಮೊದಲ ಹಣ್ಣು...ಚೆನ್ನಾಗಿ ಹಣ್ಣಾಗಿತ್ತು.

ಅಂಕುಶ : ಯಾವ ಹಣ್ಣು.

: ನಮಗೆ ಗೊತ್ತಿಲ್ಲ. ತಿಂದವನಿಗೇ ಗೊತ್ತು-ಇರಬೇಕು.

ಅಂಕುಶ : (ಸಂಶಯಾಸ್ಪದ ಕಳ್ಳನಿಗೆ) ಯಾವ ಹಣ್ಣು ?

ಸಂಶಯಾಸ್ಪದ ಕಳ್ಳ: ನಾನು ಹಣ್ಣು ತಿಂದೇ ಇಲ್ಲ. ಹಣ್ಣಿಗೆ ಕೈಕೂಡ ಹಚ್ಚಿಲ್ಲ. ಬೇಕಾದ್ರೆ ಆಣೆ ಮಾಡಿ ಹೇಳ್ತೀನಿ. ಯಾವ ಆಣೆ ಬೇಕಾದ್ರೂ ಮಾಡ್ತೀನಿ. ತಂದೆ-ತಾಯಿ ಆಣೆ.

: ಇವನ ಮಾತಿನ ಮೇಲೆ ವಿಶ್ವಾಸವಿಡೋಕ್ಕಾಗಲ್ಲ. ಈತ ತಂದೆಗೂ ತಿಂದಿದ್ದಾನೆ. ತಾಯಿಗೂ ತಿಂದಿದ್ದಾನೆ. ಈಗ ಹಣ್ಣನ್ನೂ ತಿಂದಿದ್ದಾನೆ.

ಸಂಶಯಾಸ್ಪದ ಕಳ್ಳ: ಇಲ್ಲ ನಾನು ಹಣ್ಣು ತಿಂದಿಲ್ಲ.

ಅಂಕುಶ : ಯಾಕೆ ತಿನ್ನಲಿಲ್ಲ. ಗಿಡ ನೆಡುವಾಗ ನೀನು ಕಷ್ಟ ಪಡಲಿಲ್ಲವೆ ?

ಸಂಶಯಾಸ್ಪದ ಕಳ್ಳ: (ಕೈ ತೋರಿಸುತ್ತ) ನೋಡಿ ಇಲ್ಲಿ. ಕೈಗೆ ಎಷ್ಟು ಗಾಯಗಳಾಗಿವೆಯಂತ. ನಾನು ಕಡಮೆ ದುಡೀಲಿಲ್ಲ.

ಅಂಕುಶ : ಅದಕ್ಕಾಗಿ ನೀನು ಹಣ್ಣು ತಿಂದೆಯಾ ?

ಸಂಶಯಾಸ್ಪದ ಕಳ್ಳ: ನಾನು ಹಣ್ಣು ತಿಂದಿಲ್ಲ. ನನ್ನ ಮೇಲೇನೇ ನೀವ್ಯಾಕೆ ಸಂಶಯ ಪಡ್ತಿದ್ದೀರಾ ? ನಾನೇ ತಿಂದಿದ್ದೀನಿ ಅಂತ ಹೇಗೆ ಹೇಳ್ತೀರಾ ? ನಿಮ್ಮಲ್ಲಿಯೇ ಯಾರಾದರೂ ತಿಂದಿರಬಹುದು.

(ಪ್ರತಿಯೊಬ್ಬನೂ ಪ್ರಮಾಣ ಮಾಡಿ ಹೇಳುತ್ತಾನೆ)

: ನಾನು ತಿಂದಿಲ್ಲ.

ಅಂಕುಶ : ನಿಮ್ಮಲ್ಲಿ ಯಾರೋ ಹಣ್ಣು ತಿಂದಿದ್ದು ಸೂರ್ಯಪ್ರಕಾಶದಷ್ಟು ಸ್ಪಷ್ಟ. ಸುಮ್ನೆ ಅವರಿವರ ಮೇಲೆ ಗೂಬೆ ಕೂರಿಸೋದು ಸರಿಯಲ್ಲ.

: ಹೇಳಿ ಯಾರು ತಿಂದಿದ್ದೀರಿ ?

ಅಂಕುಶ : ಯಾರು ಹಣ್ಣು ತಿಂದಿದ್ದಾರೊ ಅವರ ತಲೆಯ ಮೇಲೆ ಇದೆ ಬಿಳಿ ಕೋಳಿಯ ಕಪ್ಪು ಗರಿ.

ಸಂಶಯಾಸ್ಪದ ಕಳ್ಳ: ಬಿಳಿಕೋಳಿಯ ಕಪ್ಪು ಗರಿ ?

(ತನ್ನ ತಲೆಯ ಮೇಲೆ ಕೈ ಹಾಕಿ ನೋಡುತ್ತಾನೆ. ಎಲ್ಲರೂ ಅವನನ್ನು 'ಕಳ್ಳ ಕಳ್ಳ' ಎಂದು ಛೇಡಿಸುತ್ತಾರೆ. ಅವನು ನಾಚುತ್ತಾನೆ.)

: (ಅಂಕುಶನಿಗೆ) ಹೇಳಿ, ಇವನಿಗೆ ಯಾವ ಶಿಕ್ಷೆ ಕೊಡೋದು ?

: ಹಣ್ಣು ತಿಂದು ಹೊಟ್ಟೆ ಉಬ್ಬಿಹೋಗಿದೆ.

: ನಾಲ್ಕು ದಿನ ಉಪವಾಸವಿರುವ ಶಿಕ್ಷೆ ಕೊಡಬೇಕು.

: (ಅಂಕುಶನ ಕಿವಿಯಲ್ಲಿ) ಉಪವಾಸವಿರುವ ಶಿಕ್ಷೆ ಕೊಡೋದು ಸರಿಯಲ್ಲ. ಈ ಊರಿನ ಜನಕ್ಕೆ ಊಟವಿಲ್ಲದೆ ನಾಲ್ಕು ನಾಲ್ಕು ಎಂಟೆಂಟು ದಿನ ಉಪವಾಸ ಇರೋ ಅಭ್ಯಾಸವಿದೆ.

: ಈತನ ಅಪರಾಧ ನಿಮ್ಮ ತಲೆಯ ಮೇಲೆ ಬೇಡ.

: ಸ್ವಾಮಿಗಳಿಗೆ ಒಪ್ಪಿಗೆಯಾಗುವಂಥದ್ದ ಮಾಡೋದು.

ಅಂಕುಶ : ಹಣ್ಣು ಹೇಗಿತ್ತು-ಅಂದರೆ ಆಕಾರದಲ್ಲಿ.....

| | |
|---|---|
| : | ಚಿಕ್ಕದಿತ್ತು. |
| : | ಅಲ್ಲ - ದೊಡ್ಡದು. |
| : | ಉದ್ದವಾಗಿತ್ತು. |
| : | ಇಲ್ಲ ಚಪ್ಪಟೆಯಾಗಿತ್ತು. |
| | (ಯಾರಿಗೂ ಸರಿಯಾಗಿ ಹೇಳಲು ಬರುವುದಿಲ್ಲ. ಅಂಕುಶ ಕಳ್ಳನನ್ನೇ ಕೇಳುತ್ತಾನೆ.) |
| ಅಂಕುಶ : | ಹಣ್ಣು ಹೇಗಿತ್ತು ? |
| ಸಂಶಯಿತ ಕಳ್ಳ : | (ಕೈಯಿಂದ ಗೋಲಾಕೃತಿ ಮಾಡುತ್ತ) ದುಂಡಗಿತ್ತು. |
| ಅಂಕುಶ : | ಹಣ್ಣು ದುಂಡಗಿತ್ತು ಪೇರಲ ಹಣ್ಣಿನಂತೆ ! ನೆಲದ ಮೇಲೆ ಬಿದ್ದರೆ ಉರುಳಿ ಹೋಗುವಂತಹುದು. ಇಲ್ಲಿಂದ ದೂಡಿದರೆ ಅಲ್ಲಿ ಹೋಗಿ ಬೀಳುವಂಥದ್ದು. ಅಲ್ಲಿಂದ ಒದ್ದರೆ ಇಲ್ಲಿ ಬಂದು ಬೀಳುವಂಥದ್ದು. (ಜನಕ್ಕೆ) ಇವನನ್ನು ಪೇರಲ ಹಣ್ಣು ಮಾಡಿ. |
| | (ಎಲ್ಲರೂ ಕಳ್ಳನನ್ನು ಮಧ್ಯೆಯಿಟ್ಟು ಒಬ್ಬರ ಮೈಮೇಲೊಬ್ಬರು ದೂಡಿ ಒಗೆಯುತ್ತಾರೆ. ಕೆಲವರು ಕೈಯಿಂದ, ಕೆಲವರು ಕಾಲಿನಿಂದ ದೂಡುತ್ತಾರೆ. ಹೀಗೆ ಮಾಡುಮಾಡುತ್ತ ಜನ ನೇಪಥ್ಯಕ್ಕೆ ಸರಿಯುತ್ತಾರೆ. ಈಗ ಅಂಕುಶ ಮತ್ತು ಅಜ್ಜಯ್ಯ ಇಬ್ಬರೇ ರಂಗಭೂಮಿಯಲ್ಲಿದ್ದಾರೆ. ಆಗಿನಂತ ಅಂಕುಶನನ್ನು ಅಜ್ಜಯ್ಯ ಸೂಕ್ಷ್ಮವಾಗಿ ಗಮನಿಸುತ್ತಾರೆ. ಅಂಕುಶ ಅಜ್ಜಯ್ಯನ ಕಣ್ಣಿಗೆ ಕಣ್ಣು ಹಚ್ಚುವುದಿಲ್ಲ. ಅಲ್ಲಿಂದ ತಕ್ಷಣ ಕಾಲ್ ತೆಗೆಯುತ್ತಾನೆ) |
| | (ರಂಗಭೂಮಿಯಲ್ಲಿ ಬೆಳಕು ಮೂಡುತ್ತದೆ. ನೀರಿಗಾಗಿ ಶಿಕ್ಷೆಯಾದ ಹುಡುಗ, ಹೂವಿಗಾಗಿ ಶಿಕ್ಷೆ ಅನುಭವಿಸಿದ ಹೆಣ್ಣುಮಗಳು ಮತ್ತು ಅವಳ ಗಂಡ, ಹಣ್ಣಿಗಾಗಿ ಶಿಕ್ಷೆ ಅನುಭವಿಸಿದ ಮನುಷ್ಯ ನಿದಾನಗತಿಯಲ್ಲಿ ನಡೆಯುತ್ತಿದ್ದಾರೆ. ಹೆಣ್ಣುಮಗಳು ತಲೆಯ ಮೇಲೆ ಸೆರಗು ಹಾಕಿಕೊಂಡಿದ್ದಾಳೆ. ಅವರ ಕಂಕುಳಲ್ಲಿ, ತಲೆಯ ಮೇಲೆ ಅವರ ಸಾಮಾನುಗಳ ಗಂಟು ಮೂಟೆಗಳಿವೆ. ಅವರ ಹಿಂದೆ ಮುಂದೆ ಕೆಲ ಜನ ಕೂಡುತ್ತಾರೆ.) |
| ಜನ : | ನೀವು ಏನ್ ಮಾಡ್ತಿದ್ದೀರ ? |
| : | ಈ ಗಂಟು ಮೂಟೆ ತಗೊಂಡು ಎಲ್ಲಿಗೆ ಹೊರಟಿದ್ದೀರ ? |
| ಹಣ್ಣಿನ ಕಳ್ಳ : | ನಾವು ಊರು ಬಿಟ್ಟು ಹೋಗ್ತಾ ಇದ್ದೀವಿ. |
| | (ಎಲ್ಲರಿಗೂ ಆಶ್ಚರ್ಯವಾಗುತ್ತದೆ.) |
| ಗಂಡ : | ನಮಗಾಗಿ ಇಲ್ಲಿ ಏನಿದೆ ? ನೀರಡಿಸಿದರೆ ನೀರು ಕುಡಿಯುವಂತಿಲ್ಲ. ಹಸಿವಾದ್ರೆ ಹಣ್ಣು ತಿನ್ನೋಕಾಗಲ್ಲ. ಉತ್ಸಾಹದಿಂದ ಒಂದು ಹೂವು ಕೊಯ್ದು ಮುಡಿಗೇರಿಸುವಂತಿಲ್ಲ. |

ಹೆಣ್ಣು : ಶಿಕ್ಷೆಗಳಂತೂ ಯಾರೂ ನೋಡದಿರುವಂಥವು. ಯಾರು ಎಂದೂ ಕೇಳದಿರುವಂಥ ಶಿಕ್ಷೆಗಳು. ಹುಡುಗ ಅಂತ ನೋಡೋದಿಲ್ಲ. ಹೆಣ್ಣು ಅಂತ ನೋಡೋದಿಲ್ಲ. ನಮ್ಮೂರಿನ ಅಣ್ಣತಮ್ಮಂದಿರೆ ನಮ್ಮ ಮೇಲೆ ಕೈ ಮಾಡ್ತಾರೆ. ನಮಗೆ ಇಲ್ಲಿ ಯಾವ ಮಾನ ಮರ್ಯಾದೆ ಇದೆ ಹೇಳಿ.

(ಜನಕ್ಕೆ ತಿಳಿವಳಿಕೆ ಮೂಡುತ್ತದೆ)

: ಇದೆಲ್ಲ ಆ ಅಂಕುಶನಿಂದಾಗುತ್ತದೆ.

: ಊರಿಂದಾಚೆ ಓಡಿಸೋದಿದ್ರೆ ಅವನನ್ನೇ ಮೊದಲು ಓಡಿಸಬೇಕು.

: ನಾನಂತೀನಿ ನಮ್ಮ ಜುಟ್ಟು ಆ ಅಂಕುಶನ ಕೈಯಲ್ಲೇಕೆ ಕೊಡಬೇಕು?

: ನನಗೂ ಹಾಗೇ ಅನ್ನಿಸುತ್ತೆ. ನಾವು ಮೃದುವಾಗಿ ಇರ್ತೀವಿ. ಈ ಅಂಕುಶ ನಮ್ಮನ್ನು ಹಿಂಡಿ ಹಿಂಡಿ ಹಿಂಡುತ್ತಾನೆ. ಬಾಯಿಗೆ ಬಂದದ್ದು ಮಾತಾಡ್ತಾನೆ. ಮನಸ್ಸಿಗೆ ತೋಚಿದಂತೆ ನಡೆದು ಕೊಳ್ತಾನೆ. ನಾವು ಮಾತ್ರ ಅವನು ಹೇಳಿದ್ದನ್ನೆಲ್ಲ ಸುಮ್ಮನೆ ಕೇಳಿ ಕೊಂಡಿರಬೇಕು. ಅವನಿಗೂ ನಮಗೂ ಏನ್ ಸಂಬಂಧ ?

(ಅಕಸ್ಮಾತ್ ಅಂಕುಶ ಬರುತ್ತಾನೆ)

ಅಂಕುಶ : ನಾನು ನಿಮ್ಮಪ್ಪ. ನಿನ್ನ, ನಿನ್ನ, ನಿನ್ನ, ನಿಮ್ಮೆಲ್ಲರ ಅಪ್ಪ ನಾನು. ನನಗೆ ಊರಿಂದ ಆಚೆ ಕಳಿಸ್ತೀರಾ ? ನಿಮ್ಮೂರಲ್ಲಿ ಏನಿಟ್ಟಿದ್ದಾರೆ ನಾನು ಇಲ್ಲಿ ಬಂದು ಬಿದ್ದುಕೊಳ್ಳೋದಕ್ಕೆ. ನಿಮ್ಮೂರಿಗೇನು ಜೇನುತುಪ್ಪ ಅಥವಾ ಬಂಗಾರ ಅಂಟಿಕೊಂಡಿದೆಯೆ ? ನೀವು ಒತ್ತಾಯ ಮಾಡಿದ್ರೀಂತ ನಿಂತೆ. ನೀವು ನನ್ನ ಕತ್ತು ಹಿಡಿದು ಎತ್ತಿದ ದಿನವೇ ನಾನು ನಿಮ್ಮೂರಿಗೆ ಬೆನ್ನು ತಿರುಗಿಸಿ ಹೋಗುವವನಿದ್ದೆ.

(ಜನ ಶಾಂತರಾಗುತ್ತಾರೆ. ಒಬ್ಬೊಬ್ಬನೇ ಮಾತಾಡುವ ಪ್ರಯತ್ನ ಮಾಡುತ್ತಾರೆ)

: ಇವರೆಲ್ಲ ಊರು ಬಿಟ್ಟು ಹೊರಟಿದ್ದಾರೆ.

(ಅಂಕುಶ ಅವರಿಗೆ ಕೈ ಮುಗಿದು ಬೀಳ್ಕೊಡುವ ಅಭಿನಯ ಮಾಡುತ್ತಾನೆ)

: ಇವರು ನಮ್ಮೂರಿನ ಅಣ್ಣತಮ್ಮಂದಿರು.

ಅಂಕುಶ : (ತಪ್ಪು ತಿದ್ದುತ್ತ) ಒಬ್ಬಳು ಊರತಂಗಿ.

: ಅದ್ಸರಿ. ಈ ಊರಿನಲ್ಲಿ ಮಾನ ಸನ್ಮಾನಗಳೇನೂ ಉಳೀಲಿಲ್ಲ ಅಂತ ಅವರಂತಿದ್ದಾರೆ.

ಅಂಕುಶ : ಮಾನ ಸನ್ಮಾನವೇ ? ಈ ಊರಿನ ಜನಕ್ಕೆ ಯಾವ ಮಾನ ಮರ್ಯಾದೆಗಳಿದ್ದವು ಮೊದಲು ? ಆ ಅಜ್ಜಯ್ಯ ಇನ್ನೂ

ಸಾಯಲಿಲ್ಲ. ಕೇಳಿ ಅವರಿಗೆ. ಅವರೇ ನನಗೆ ಹೇಳಿದ್ದು ಈ ಊರಿ ಜನಕ್ಕೆ ಮಾನ ಮರ್ಯಾದೆಗಳು ಒಂದೂ ಇಲ್ಲ ಅಂತ.

: ಹಾಗೆ ನೋಡಿದ್ರೆ ಆಗ ಅದು ನಿಜವೂ ಆಗಿತ್ತು.

: ಈಗ ಯಾವ ಬದಲಾವಣೆ ಆಗಿದೆ ? ಹಾಗಿದ್ರೆ ನೀವು ಈಗಲೂ ಮಾನ ಸನ್ಮಾನದಿಂದ ಇರಬಹುದು. ನಾನೇನೂ ಅಡ್ಡ ಬರೋದಿಲ್ಲ ಅಡ್ಡ ಬರೋಕ್ಕಾದರೂ ನಾನು ಯಾರು ? ನಾನು ನಿಮ್ಮೂ ನವನಲ್ಲ, ನಾನು ಸ್ವಾಮಿಯಲ್ಲ, ನಾನು ನಿಮಗೆ ಯಾರೂ ಅಲ್ಲ ನಾನೊಬ್ಬ ದಾರಿಹೋಕ. ಒಂದು ಮಾತು ಕಿವಿಯ ಮೇಲೆ ಬಿತ್ತು ಅದು ನಿಮಗೆ ಸಂಬಂಧಿಸಿದ ಸುದ್ದಿಯಾದ್ದರಿಂದ ನಿಮ್ಮ ಕಿವಿಯ ಮೇಲೆ ಹಾಕಿದೆ. ಏನು ನಡೆಯಬೇಕಾಗಿತ್ತೋ ಅದು ನಡದೆ ನಡೀತಿತ್ತು. ನಾನು ಕೇವಲ ನಿಮಿತ್ತ ಮಾತ್ರ.

: ಹಾಗೆ ನೀವು ನಮ್ಮ ಮೇಲೆ ತುಂಬ ಉಪಕಾರ ಮಾಡಿದ್ದೀರಿ.

ಅಂಕುಶ : ನಾನು ನಿಮ್ಮ ಮೇಲೆ ಉಪಕಾರಾನೂ ಮಾಡಲಿಲ್ಲ. ನಿಮ್ಮ ಮೇ ಅಧಿಕಾರಾನೂ ನಡೆಸಲಿಲ್ಲ. ನಾನು ನನ್ನ ಸ್ವಭಾವದಂತೆ ನಡೆದು ಕೊಂಡಿದ್ದೀನಿ. ನನ್ನಿಂದಾಗಿ ಈ ಜನ ಊರು ಬಿಟ್ಟು ಹೋಗ್ತಿದ್ದಾ ಅಂತ ನಿಮಗೆ ಅನಿಸೋದಾದ್ರೆ ನಾನೇ ಊರು ಬಿಟ್ಟು ಹೋಗೋ ಸಿದ್ಧವಾಗಿದ್ದೀನಿ.

: ಬೇಡ, ಬೇಡ...ನಾವೇ ಅವರಿಗೆ ತಿಳಿಸಿ ಹೇಳ್ತೀವಿ.

(ಅಷ್ಟರಲ್ಲಿ ಅಜ್ಜಯ್ಯ ಬರುತ್ತಾನೆ)

: ಹಿರಿಯರಾದ ಅಜ್ಜಯ್ಯ ನೀವೇ ಇವರಿಗೆ ಸ್ವಲ್ಪ ಸಮಜಾಯಿ ಹೇಳಿ.

(ಅಜ್ಜಯ್ಯ ಮೊಮ್ಮಗನನ್ನು ಬರ ಸೆಳೆಯುತ್ತಾನೆ. ಇತರರಿಗೆ ಊರು ಬಿಟ್ಟ ಹೋಗಬೇಡಿ ಎಂದು ಸಂಜ್ಞೆ ಮಾಡಿ ಹೇಳುತ್ತಾನೆ. ಅವರ ಹಿಂತಿರುಗುತ್ತಾರೆ.)

ಒಬ್ಬವ : (ಕೊಂಚ ಗಂಭೀರವಾಗಿ) ಅಂಕುಶ, ಕೆಲವು ವಿಷಯ ನೀವು ನನ ಹೇಳಲೇಬೇಕಾಗುತ್ತೆ.

ಅಂಕುಶ : ನಿನ್ನ ದನಿಯಲ್ಲಿ ಕೊಂಚ ಗಡಸುತನ, ಆ ಗಡಸುತನದಲ್ಲಿ ಒಂದ ಫರ್ಮಾನು, ಆ ಫರ್ಮಾನಿನಲ್ಲಿ ಒಂದು ಬಗೆಯ ಅಧಿಕಾ ಇದೆಯಂತ ನಿನಗೆ ಅನ್ನಿಸುತ್ತದೆಯೆ ? ನನಗೆ ಇಂಥ ಮಾತುಗ ಅಭ್ಯಾಸವಿಲ್ಲ.

ಒಬ್ಬವ : ಹಾಗೆ ಅಧಿಕಾರದಿಂದಲ್ಲ, ನಮ್ರತೆಯಿಂದ ಒಂದು ವಿಷಯ ನಿಮ್ಮಿಂದ ತಿಳಿದುಕೊಳ್ಳಬೇಕೂಂತ.

ಅಂಕುಶ : ಸ್ವಾಮಿ ಯಾವಾಗ ಬರ್ತಾರೆ ?

ಬ್ಬ : ಹೌದು.

ಅಂಕುಶ : ಈಗ ಸ್ವಾಮಿ ಚೈತನ್ಯ ಕುಮಾರ ಬರದಿರುವುದಕ್ಕೆ ಯಾವ ಕಾರಣವೂ ಉಳಿದಿಲ್ಲ.

: ಅಂದರೆ ?

ಅಂಕುಶ : ಸ್ವಾಮಿ ಚೈತನ್ಯ ಕುಮಾರರ ಸ್ವಾಗತದ ಎಲ್ಲ ಸಿದ್ಧತೆಗಳೂ ಮುಗಿದಿವೆ. ಗುಟುಕು ನೀರಿಗಾಗಿ ತೋಡಿದ ದೊಡ್ಡ ಕೆರೆ ನೀರಿನಿಂದ ತುಂಬಿಕೊಂಡಿದೆ. ಸ್ವಾಮಿಗಳ ಕಾಲಡಿಯಲ್ಲಿ ಹಾಸುವುದಕ್ಕೆ ಬೇಕಾದ ಹೂವುಗಳ ರಾಶಿಯೂ ಅರಳಿ ನಿಂತಿದೆ. ಕೊಂಬೆ ರೆಂಬೆಗಳಿಗೂ ತೂಗುಬಿದ್ದ ಹಣ್ಣು ಹಂಪಲಗಳೂ ಸ್ವಾಮಿಗಳ ಬರವನ್ನು ಕಾಯುತ್ತಿವೆ. ಸ್ವಾಮಿಗಳಿಗೆ ಇವೆಲ್ಲವುಗಳು ಗೊತ್ತಿಲ್ಲವೆಂದು ಭಾವಿಸುವುದು ತಪ್ಪು. ಸ್ವಾಮಿಗಳು ಅಂತರ್ಯಾಮಿಗಳು. ಅವರಿಗೆ ಅದು ಹೊಳೆದಿರಬಹುದು. ಆದ್ದರಿಂದ ಸ್ವಾಮಿಗಳು ಯಾವುದೇ ಕ್ಷಣಕ್ಕೆ ಇಲ್ಲಿ ಹಾಜರಾಗಬಹುದು..

(ಜನರಿಗೆ ತುಂಬ ಖುಷಿಯಾಗಿದೆ.)

ಅಂಕುಶ : ನಿಮ್ಮಿಂದ ಇನ್ನೊಂದು ಕೆಲಸ ಆಗಬೇಕಾದದ್ದು ಉಳಿದಿದೆ.

: ಯಾವ ಕೆಲಸ ?

ಅಂಕುಶ : ಮಠ. ಸ್ವಾಮಿ ಚೈತನ್ಯಕುಮಾರರು ನಿಮ್ಮೂರಿನಲ್ಲಿ ಮಠ ಕಟ್ಟಿಸುವ ಸಂಕಲ್ಪ ಮಾಡಿದ್ದಾರೆ.

: ಮಠ ನಾವು ಕಟ್ಟೋದೆ ?

ಅಂಕುಶ : ಇಲ್ಲ. ಮಠ ಸ್ವಾಮಿಗಳೇ ಕಟ್‌ತಾರೆ. ನೀವು ಸಿದ್ಧತೆ ಮಾಡಿದರೆ ಸಾಕು.

: ಅಂದರೆ ?

ಅಂಕುಶ : ಮಠಕ್ಕಾಗಿ ಬೇಕಾಗುವ ಕಲ್ಲು ಸೇರಿಸುವುದು. ಪ್ರತಿಯೊಬ್ಬರೂ ಒಂದೊಂದು ಕಲ್ಲನ್ನಾದರೂ ತರಬೇಕು. ಎಲ್ಲಿಂದಲಾದರೂ ಹುಡುಕಿ ತರಬೇಕು. ಬೆಟ್ಟದ ಮೇಲಿಂದ ತರಬಹುದು, ಕಟ್ಟೆಯ ಮೇಲಿಂದ ತರಬಹುದು. ಬಟ್ಟೆಯ (ದಾರಿ) ಮೇಲಿಂದ ತರಬಹುದು. ಎಲ್ಲಿಂದಲಾದರೂ ತರಬಹುದು. ಒಟ್ಟಿನಲ್ಲಿ ಒಂದೊಂದು ಕಲ್ಲು ತರಲೇಬೇಕು. ಒಂದೊಂದು ಕಲ್ಲು.
ಅಜ್ಜ ಮತ್ತು ಮುತ್ತಜ್ಜನ ಒಂದೊಂದು ಕಲ್ಲು.
ತಂದೆ ಮತ್ತು ತಾಯಿಯ ಒಂದೊಂದು ಕಲ್ಲು.
ಅಣ್ಣ ಮತ್ತು ತಂಗಿಯ ಒಂದೊಂದು ಕಲ್ಲು.
ಅತ್ತೆ ಮತ್ತು ಮಾವನ ಒಂದೊಂದು ಕಲ್ಲು.

ಅತ್ತಿಗೆ ಮತ್ತು ನಾದಿನಿಯರ ಒಂದೊಂದು ಕಲ್ಲು.
ಹುಡುಗ ಮತ್ತು ಶಿಶುವಿನ ಒಂದೊಂದು ಕಲ್ಲು.
(ಹಿಂದೆ ಕೈ ತಟ್ಟುವಾಗ ಹೊರಟ ಸಾಮೂಹಿಕ ಸ್ವರ ಪ್ರತಿಧ್ವನಿಸ ತೊಡಗುತ್ತದೆ. ಅದೇ ಸ್ವರ-ತಾಳಗಳ ಮೇಲೆ ಒಬ್ಬೊಬ್ಬರು ಒಂದೊಂದು ಕಲ್ಲು ತಂದು ರಾಶಿಯಲ್ಲಿ ಹಾಕುತ್ತಿದ್ದಾರೆ. ಜನಗಳಿಗೆ ದಣಿವು ಆಗಿದೆ. ದಣಿವು ಆಗಿದೆಯೆನ್ನುವುದಕ್ಕಿಂತ ಒತ್ತಾಯದಿಂದ ಕೆಲಸ ಮಾಡುತ್ತಿರುವಂತಿದೆ. ಕೆಲಸ ಜೋರಿನಲ್ಲಿ ನಡೆದಾಗ ಅಂಕುಶ ಅಲ್ಲಿಂದ ಮೆಲ್ಲನೆ ಕಾಲು ಕೀಳುತ್ತಾನೆ. ಕಲ್ಲಿನ ರಾಶಿ ಬೀಳುತ್ತದೆ. ಕೆಲಸ ನಡೆಯುತ್ತಿರುವಾಗಲೇ ಅಕಸ್ಮಾತ ಅಂಕುಶ ಕಲ್ಲಿನ ರಾಶಿಯ ಮೇಲೆ ನಿಂತುಕೊಳ್ಳುತ್ತಾನೆ. ಜನರನ್ನು ಉದ್ದೇಶಿಸಿ ಮಾತನಾಡುತ್ತಾನೆ.)

ಅಂಕುಶ : ಸ್ವಾಮಿ ಚೈತನ್ಯ ಕುಮಾರರ ಮಠಕ್ಕಾಗಿ ದುಡಿಯುವ ನಿಷ್ಠಾವಂತ ಜನರೇ ಕೇಳಿ. ನೀವು ಮಾಡಿದ ಕೆಲಸ ಫಲಪ್ರದವಾಗುವುದರಲ್ಲಿದೆ. ಸ್ವಾಮಿ ಚೈತನ್ಯಕುಮಾರರು ಯಾವುದೇ ಕ್ಷಣದಲ್ಲಿ ನಿಮ್ಮ ಮುಂದೆ ಪ್ರಕಟವಾಗಬಹುದು. ಕಲ್ಲು ಸಂಗ್ರಹಿಸುವ ಕೆಲಸ ಈಗ ನಿಲ್ಲಿಸಿ ಸ್ವಾಮಿಗಳ ಸ್ವಾಗತದ ತಯಾರಿ ಮಾಡಿ.
(ಜನರಲ್ಲಿ ಖುಷಿ ಪಸರಿಸುತ್ತದೆ. ಜನ ಕೈ ಝಾಡಿಸಿ ರಾಶಿಯಿಂದ ಹೊರಗೆ ಬರುತ್ತಾರೆ.)
ಹಬ್ಬ ಹುಣ್ಣಿಮೆಗಳಿಗೆ ಧರಿಸುವಂತಹ ಬಟ್ಟೆ ಬರೆ ಧರಿಸಿ, ಹೆಣ್ಣು ಮಕ್ಕಳು ಆರತಿ ತಟ್ಟೆ ಹಿಡಿದು ಮುಂದೆ ನಿಲ್ಲುವುದು. ಸ್ವಾಮಿಗಳ ಪಾದಸ್ಪರ್ಷ ನಿಮ್ಮೂರಿಗೆ ಆದ ತಕ್ಷಣ ನಾನು ಒಂದು ಕ್ಷಣವೂ ಇರುವುದಿಲ್ಲ ಅಂತ ನಾನು ನಿಮಗೆ ಮೊದಲೇ ಸೂಚನೆ ಕೊಟ್ಟಿದ್ದೀನಿ. ಪ್ರಾಯಶಃ ನೀವೂ ಹಾಗೇ ಯೋಚಿಸಿರಬಹುದು. ನಾನು ಸ್ವಾಮಿಗಳ ಶಿಷ್ಯನಲ್ಲ ಮತ್ತು ಭಕ್ತನೂ ಅಲ್ಲ. ಆದರೂ ನನಗೆ ಸ್ವಾಮಿಗಳ ಬಗ್ಗೆ ಗೊತ್ತಿರೋದೆಲ್ಲ ಮುಚ್ಚುಮರೆಯಿಲ್ಲದೆ ನಿಮಗೆ ಹೇಳಿದ್ದೀನಿ. ಸ್ವಾಮಿಗಳ ಒಂದು ಗುಟುಕು ನೀರಿನ ಬಗ್ಗೆ ನಾನು ನಿಮಗೆ ಹೇಳಿದ್ದೀನಿ. ಸ್ವಾಮಿಗಳ ಪೂಜೆಯ ಬಗ್ಗೆ, ಫಲಾಹಾರದ ಬಗ್ಗೆ ನಾನು ಸ್ಪಷ್ಟವಾಗಿ ಹೇಳಿದ್ದೇನೆ. ಅದರಲ್ಲಿ ಒಂದಿಷ್ಟೂ ಸುಳ್ಳಿಲ್ಲ. ಸ್ವಾಮಿಗಳ ಬಗ್ಗೆ ಇನ್ನೊಂದು ವಿಷಯ ಹೇಳಬೇಕಾಗಿದೆ. ಅದನ್ನು ಬೇಕಾದರೆ ಹಿಂದೆಯೇ ಹೇಳಬಹುದಿತ್ತು. ಈಗ ಹೇಳ್ತೀನಿ ಕೇಳಿ ಸ್ವಾಮಿ ಚೈತನ್ಯ ಕುಮಾರರ ಸೇವೆಗೆ ಒಂದು ರಾತ್ರಿಗೆ ಒಂದು ಹೆಣ್ಣು ಬೇಕಾಗ್ತಾಳೆ. ನೀವು ಕೆರೆ ತೋಡುವ ಕೆಲಸದಲ್ಲಿ ಹೂ-ಹಣ್ಣಿನ ಗಿಡ ಬೆಳೆಸುವ ಸಮಯದಲ್ಲಿ ತೆಗೆದುಕೊಂಡ ಕಷ್ಟ ಈಗ ಪಡ

ಬೇಕಾಗಿಲ್ಲ. ಯಾಕೆಂದರೆ ನಿಮ್ಮ ಮನೆಯಲ್ಲಿ ನಿಮ್ಮ ಹೆಂಡತಿಯಿರಬಹುದು, ಅಕ್ಕ-ತಂಗಿ ಯಾರಾದರೂ ಇರಬಹುದು. ಅದಿಲ್ಲದಿದ್ದರೆ ಮಗಳಾದರೂ ಇರಲೇಬೇಕು.

(ಜನ ಗಲಿಬಿಲಿಗೊಳ್ಳುತ್ತಾರೆ. ಅವರೆಲ್ಲರೂ ಕೈ ಮಾಡಿ ಅಂಕುಶನನ್ನು ಕೆಳಗೆ ಕರೆಯುತ್ತಾರೆ. ಆತ ರಾಶಿಯಿಂದ ಇಳಿದು ಜನಗಳ ಬಳಿ ಬರುತ್ತಾನೆ)

: ಇದೇನು ಪ್ರಕರಣ ?

ಅಂಕುಶ : ಯಾವ ಪ್ರಕರಣ ?

: ಒಂದು ರಾತ್ರಿಗೆ ಒಂದು ಹೆಣ್ಣು ಅಂದರೇನು ?

ಅಂಕುಶ : ಸೇವೆಗಾಗಿ ?

: ಎಂಥ ಸೇವೆ ?

ಅಂಕುಶ : ಎಂಥ ಸೇವೆ ಅಂದ್ರೆ. ಶರೀರ ಸೇವೆ. ಗಂಡ ಮತ್ತು ಹೆಂಡತಿ ರಾತ್ರಿ ಒಂದೇ ಕಡೆಗೆ ಇದ್ದರೆ ಏನ್ ಮಾಡ್ತಾರೆ ? ಉಪಭೋಗ.

: ನಮ್ಮ ಹೆಣ್ಣು ಮಕ್ಕಳು ಈ ಕೆಲಸ ಮಾಡೋದೆ ?

ಅಂಕುಶ : ಅವರು ಮಾಡದೆ ಗಂಡಸರು ಈ ಸೇವೆ ಮಾಡ್ತಾರೆಯೆ ? ಈ ಸ್ವಾಮಿ ಅಂಥವರಲ್ಲ. ಇವರಿಗೆ ಹೆಣ್ಣು ಮಕ್ಕಳೇ ಬೇಕು.

: ನಮ್ಮ ಹೆಣ್ಣು ಮಕ್ಕಳು ಇಂಥ ಕೆಲಸ ಮಾಡಲಿಕ್ಕಿಲ್ಲ.

ಅಂಕುಶ : ಎಲ್ಲರ ಪರವಾಗಿ ಮಾತಾಡೋದು ಬೇಡ. ನೀವು ದಬಾಯಿಸಿದರೆ ಹೆಣ್ಣು ಮಕ್ಕಳು ಕೊಂಚ ಹಿಂದೆ ಸರಿಯಬಹುದು. ಆದರೆ ಹೆಣ್ಣು ಮಕ್ಕಳಿಗೆ ಇಂಥ ಸ್ವಾಮಿಗಳು ಹಿಡಿಸುತ್ತಾರೆ. ಜಗತ್ತಿನ ಎಲ್ಲ ಸ್ವಾಮಿಗಳ ಇತಿಹಾಸ ತೆಗೆದು ನೋಡಿ. ಒಂದೆರಡು ಅಪವಾದಗಳನ್ನು ಬಿಟ್ಟರೆ ಎಲ್ಲಾ ಸ್ವಾಮಿಗಳು ಹೆಣ್ಣು ಮಕ್ಕಳ ಹಿಂದೆ ಬೀಳುತ್ತಾರೆ. ಇಲ್ಲವೇ ಸ್ವಾಮಿಗಳ ಹಿಂದೆ ಹೆಣ್ಣು ಮಕ್ಕಳು ಇರುತ್ತಾರೆ.

: ನಮಗೆ ಬೇರೆ ಸ್ವಾಮಿಗಳ ವಿಚಾರ ಬೇಡ. ನಮ್ಮ ಸ್ವಾಮಿಗಳ ವಿಚಾರ ಅಷ್ಟೇ ಹೇಳು.

ಅಂಕುಶ : ನಿಮ್ಮ ಸ್ವಾಮಿಗಳ ಬಗ್ಗೆನೇ ಹೇಳ್ತೀನಿ ಕೇಳಿ. ಅವರು ಸ್ವಾಮಿಯಾದ್ರೂ ಮನುಷ್ಯರಿಗಿರುವ ಎಲ್ಲ ಇಂದ್ರಿಯಗಳು ಅವರಿಗೂ ಇವೆ. ಅವು ಈಗಲೂ ಕ್ರಿಯಾಶೀಲವಾಗಿವೆ. ಮನುಷ್ಯನಿಗೆ ಮುಖ್ಯವಾಗಿ ಎರಡು ಮುಖ್ಯ ಹಸಿವೆಗಳಿರುತ್ತವೆ. ಒಂದು ಮೇಲೆ ಇನ್ನೊಂದು ಕೆಳಗೆ.

: ಸ್ವಾಮಿಗಳು ಬ್ರಹ್ಮಚಾರಿಗಳಾಗಿರ್ತಾರೆ ಅಂತಾರೆ ಅದು ಹೇಗೆ ?

ಅಂಕುಶ : ಬ್ರಹ್ಮಚಾರಿಯಾಗಿರೋದು ಮಾನವ ಜಾತಿಯಲ್ಲಿ ಕೆಲವರಿಗೆ ಮಾತ್ರ ಸಾಧ್ಯವಾಗಿದೆ. ಅವರು ಬೆರಳೆಣಿಕೆಯಷ್ಟಿದ್ದಾರೆ. ಸ್ವಾಮಿ ಚೈತನ್ಯ ಕುಮಾರರು ಅಂಥ ಬ್ರಹ್ಮಚಾರಿಗಳಲ್ಲ. ನನಗೆ ಗೊತ್ತಿದೆ.

: ಹಾಗಿದ್ರ ನೀನು ಇದನ್ನು ಮೊದಲೇ ಯಾಕೆ ಹೇಳಲಿಲ್ಲ ?

ಅಂಕುಶ : ನೀವು ನನಗೆ ಕೇಳಿದ್ದರೆ ನಾನು ಹೇಳುತ್ತಿದ್ದೆ. ನನಗನ್ನಿಸ್ತು-ನಿಮಗೆ ಈ ವಿಷಯ ಗೊತ್ತಿರಬಹುದು. ಈ ವಿಷಯಕ್ಕೆ ನಿಮ್ಮ ಒಪ್ಪಿಗೆಯೂ ಇರಬಹುದು.

: ಇಂಥ ವಿಷಯಕ್ಕೆ ನಮ್ಮ ಒಪ್ಪಿಗೆಯೆ...ಛಿ...ಛೀ...!

: ನಮಗೆ ಮಾನ ಮರ್ಯಾದೆ ಇದೆಯೋ ಇಲ್ವೊ ?

ಅಂಕುಶ : ಮಾನ ಮರ್ಯಾದೆ ನಿಮಗೆ ?

: ಹೌದೌದು ನಮಗೆ...ಮೊದಲು ಹೇಳಿದ್ದೇನೋ ನಿಜ. ಆದರೆ ಅದು ಸರಿಯಲ್ಲ. ನಮಗೂ ಮಾನ ಸನ್ಮಾನಗಳು ಇವೆ.

ಅಂಕುಶ : ನಿಮ್ಮ ಮಾನ ಸನ್ಮಾನಗಳು ನಷ್ಟವಾಗಿ ಹೋದ್ವು. ಸ್ವಾಮಿ ಚೈತನ್ಯ ಕುಮಾರರು ನಿಮ್ಮೂರಿಗೆ ಬರುತ್ತೇವೆ ಎಂದು ಘೋಷಣೆ ಮಾಡಿದ ದಿನವೇ ನೀವು ಅವರ ಭಕ್ತರಲ್ಲ ದಾಸರಾದಿರಿ. ಅವರಿಗಾಗಿ ನೀವು ಕೆರೆ ತೋಡಿದ್ದೀರಿ. ಅವರಿಗೆ ಹೂ-ಹಣ್ಣುಗಳ ತೋಪು ಮಾಡಿದಿರಿ. ಅವರಿಲ್ಲದೆ ಒಂದು ನೀರಿನ ಗುಟುಕು ಕುಡಿಯುವ ಧೈರ್ಯ ನಿಮಗೆ ಆಗಲಿಲ್ಲ. ಅವರ ಹೆಸರಿನಲ್ಲಿ ಅರಳಿದ ಒಂದು ಹೂವು ಕಿತ್ತು ಕೊಳ್ಳುವ ಧೈರ್ಯ ನಿಮ್ಮಲ್ಲಿ ಉಳಿಯಲಿಲ್ಲ. ಹಣ್ಣಿಗೆ ಬಾಯಿ ಹಚ್ಚುವ ಧೈರ್ಯ ನಿಮಗೆ ಬರಲಿಲ್ಲ. ನಿಮಗೆ ಸ್ವಾಮಿಗಳ ಇಚ್ಛೆಯಾಚೆಗೆ ಹೋಗಲು ಬರುವುದಿಲ್ಲ. ಅಂಥ ಧೈರ್ಯ ನಿಮ್ಮಲ್ಲಿಲ್ಲ. ಸ್ವಾಮಿಗಳು ನಿಮ್ಮೂರಿಗೆ ಆಗಮಿಸಿ ನೀವು ಕಟ್ಟಿದ ಕೆರೆಯ ನೀರು ಹೀರಿ, ಬೆಳೆಸಿದ ಹಣ್ಣು ಹಂಪಲು ತಿಂದು, ನಿಮ್ಮ ಹೆಣ್ಣು ಮಕ್ಕಳೊಂದಿಗೆ ಉಪಭೋಗ ಮಾಡಿ ಸಂತುಷ್ಟರಾದರೆ ನಿಮಗೂ ಸಮಾಧಾನ ಸಿಗುತ್ತೆ. ರೋಗ ರುಜಿನಗಳ ಪಲಾಯನ, ನಿಮ್ಮಂತಹ ಅನ್ನಕ್ಕೆ ಗತಿಯಿಲ್ಲದ ನತದೃಷ್ಟರಿಗೆ ಇದಕ್ಕಿಂತ ಹೆಚ್ಚು ಏನು ಬೇಕು ?

(ಎಲ್ಲರೂ ತಮ್ಮ ತಮ್ಮೊಳಗೆ ಉಸಿರುಗಟ್ಟಿದಂತಹ ಅನುಭವ ಪಡೆಯುತ್ತಾರೆ. ಯಾರೂ ಮಾತಾಡುವುದಿಲ್ಲ. ಎಲ್ಲರೂ ಒಬ್ಬೊಬ್ಬರಾಗಿ ಕಲ್ಲಿನ ರಾಶಿಯ ಮೇಲೆ ಕುಂಡಿಯೂರಿ ಕುಳಿತುಕೊಳ್ಳುತ್ತಾರೆ. ಒಬ್ಬನ ಕೈ ಹಣೆಯ ಮೇಲೆ, ಇನ್ನೊಬ್ಬನ ಕೈ ಕಣ್ಣಿನ ಮೇಲೆ, ಮತ್ತೊಬ್ಬನ ಕೈ ಕಿವಿಯ ಮೇಲಿದೆ)

ಅಂಕುಶ : ಮಾನ ಸನ್ಮಾನದ ಬಗ್ಗೆ ಅಗತ್ಯಕ್ಕಿಂತ ಹೆಚ್ಚು ನಟನೆ ಬೇಡ. ಸ್ವಾಮಿಗಳು ಯಾವ ಕ್ಷಣಕ್ಕೂ ಬಂದ್‌ಬಿಡಬಹುದು. ಅವರ ಕೃಪೆಗೆ ಪಾತ್ರರಾಗಿ, ಅವರ ಅವಕೃಪೆಗೆ ಬಲಿಯಾಗಬೇಡಿ.

(ಅಂಕುಶ ಹೋಗುತ್ತಾನೆ. ಎಲ್ಲರೂ ಸ್ಥಿರಮೂರ್ತಿಗಳಂತೆ ನಿಂತಲ್ಲಿಯೆ

ನಿಲ್ಲುತ್ತಾರೆ. ಒಳಗಡೆಯಿಂದ ಮೊದಲಿನ ದನಿ ಮಂದ ಸ್ವರದಲ್ಲಿ ಕೇಳಿ ಬರುತ್ತದೆ. ಕಲ್ಲುಗಳ ರಾಶಿಯ ಮೇಲೆ ಕುಳಿತ ಜನರ ಮೇಲೆ ಪ್ರಕಾಶ ಬಿದ್ದು ಮಾಯವಾಗುತ್ತದೆ. ಕತ್ತಲೆ ಆವರಿಸುತ್ತದೆ.)

(ದೂರದಲ್ಲಿ ಒಂದು ಗುಂಪು ಘೋಷಣೆ ಕೂಗುತ್ತ ಬರುತ್ತಿರುವುದು ಕೇಳಿ ಬರುತ್ತದೆ.

'ಸ್ವಾಮಿ ಚೈತನ್ಯಕುಮಾರ ಮಹಾರಾಜರಿಗೆ ಜಯವಾಗಲಿ' ಎಂಬ ಘೋಷಣೆಗಳು. ನಿದಾನವಾಗಿ ರಂಗಭೂಮಿಯಲ್ಲಿ ಬೆಳಕುಮೂಡುತ್ತದೆ. ಜನ ಅದೇ ಸ್ಥಿತಿಯಲ್ಲಿ ಕೂತಿದ್ದಾರೆ. ದೂರದಿಂದ ಅಂಕುಶ ದಬದಬನೆ ಓಡಿಬರುತ್ತಾನೆ.)

ಅಂಕುಶ : ಸ್ವಾಮಿ ಚೈತನ್ಯ ಕುಮಾರ ಮಹಾರಾಜ ಕೀ ಜೈ.

(ಈ ದನಿ ಕೇಳಿದ ಕೂಡಲೇ ಬೆನ್ನು ಮಾಡಿ ಕುಳಿತ ಜನ ತಿರುಗಿ ನೋಡುತ್ತಾರೆ. ಪ್ರತಿಯೊಬ್ಬನ ಕೈಯಲ್ಲಿ ಚಿಕ್ಕ-ದೊಡ್ಡ ಕಲ್ಲು ಇದೆ. ಅಂಕುಶ ಅವರನ್ನೇ ನೋಡುತ್ತಿದ್ದಾನೆ. ಅವನ ಬಾಯಿಯಲ್ಲಿಯ ಘೋಷಣೆಗಳು ಬಾಯಿಯಲ್ಲಿ ಸ್ಥಗಿರವಾಗುತ್ತದೆ. ಅವರಲ್ಲಿನ ಒಬ್ಬನು ಮಾತು ತೊಡಗುತ್ತಾನೆ.)

: ಅಂಕುಶ, ಈಗ ನಿಮ್ಮ ಕೆಲಸ ಮುಗೀತು. ನೀವಿನ್ನು ಬದಿಗೆ ಸರಿಯಿರಿ. ಬರುವ ಸ್ವಾಮಿಗಳಿಗೆ ನಾವು ನಮ್ಮದೇ ಆದ ರೀತಿಯಲ್ಲಿ ಸ್ವಾಗತ ಮಾಡ್ತೀವಿ.

(ಅಂಕುಶ ಎಲ್ಲರ ಮೇಲೂ ಸೂಕ್ಷ್ಮವಾಗಿ ಕಣ್ಣು ಹಾಯಿಸುತ್ತಾನೆ. ಅಲ್ಲಿಂದ ವೇಗವಾಗಿ ಹೋಗಲು ಬಯಸುತ್ತಾನೆ. ಅಷ್ಟರಲ್ಲಿ ಕೈಯಲ್ಲಿದ್ದ ಕಲ್ಲು ಬದಿಗಿಟ್ಟು ಅಜ್ಜಯ್ಯ ಓಡೋಡಿ ಬರುತ್ತಾನೆ. ಅಂಕುಶನ ಕಾಲುಗಳ ಮೇಲೆ ತಲೆಯಿಡುತ್ತಾನೆ.)

ಅಜ್ಜ : ಧನಿ, ಧನಿ ನಾನು ನಿಮ್ಮನ್ನು ಚೆನ್ನಾಗಿ ಗುರುತಿಸಿದ್ದೀನಿ.

(ಅಂಕುಶ ಅವನನ್ನು ಬದಿಗೆ ಸರಿಸಿ ಅಲ್ಲಿಂದ ವೇಗವಾಗಿ ಹೊರಟು ಹೋಗುತ್ತಾನೆ. ಯಾವ ಕಡೆಯಿಂದ ಘೋಷಣೆಗಳು ಕೇಳಿ ಬರುತ್ತಿವೆಯೋ ಅದರ ವಿರುದ್ಧ ದಿಸೆಯಲ್ಲಿ ಹೋಗುತ್ತಾನೆ.)

ಅಜ್ಜ : ಧನಿಗಳೇ....ಧನಿಗಳೆ ನಮ್ಮಿಂದ ದೂರವಿರಬೇಡಿ. ನಿಮ್ಮನ್ನು ಬಿಟ್ಟು ಹೋಗಬೇಡಿ.

(ಅಂಕುಶನ ಹಿಂದೇನೆ ಹೋಗುತ್ತಾನೆ. ಜನ ಇದನ್ನು ನೋಡಿ ಕಕ್ಕಾಬಿಕ್ಕಿ ಯಾಗಿದ್ದಾರೆ. ಆಗ ದೂರದಲ್ಲಿ ಕೇಳಿ ಬರುವ ಘೋಷಣೆಗಳು ಸಮೀಪಿಸುತ್ತವೆ. ಜನ ಜಾಗೃತರಾಗುತ್ತಾರೆ. ಕಲ್ಲುಗಳನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾರೆ. ನಾಲ್ಕೈದು ಜನರ ಒಂದು ಗುಂಪು ಬರುತ್ತದೆ.

ಅಂಕುಶನಲ್ಲಿದ್ದಂತಹ ಸ್ವಭಾವ ಅವರಲ್ಲಿಯೂ ಇದೆ. ಎಲ್ಲರ ವೇಷ ಒಂದೇ ಬಗೆಯದು. ಎಲ್ಲರೂ ಕೇಸರಿ ಬಣ್ಣದ ಉಡುಪು ಧರಿಸಿದ್ದಾರೆ. ಮುಂದಿರುವವನ ಕೈಯಲ್ಲಿ ಒಂದು ಬಾವುಟವಿದೆ. ಬಾವುಟದ ಮೇಲೆ ಚೈತನ್ಯದ ಪ್ರತೀಕವಾಗಿ ಒಂದು ಚಕ್ರ ಮತ್ತು ಸೂರ್ಯನ ಚಿತ್ರವಿದೆ. ಈ ಗುಂಪು ಚೈತನ್ಯಕುಮಾರರ ಶಿಷ್ಯಗಣ. ಅವರ ಮಾತುಗಳು ಪರಿಣಾಮ ಬೀರುವಂಥದ್ದಾಗಿದೆ)

ಮೊದಲ ಶಿಷ್ಯ : ಸ್ವಾಮಿ ಚೈತನ್ಯಕುಮಾರ ಮಹಾರಾಜಕೀ.

ಮಿಕ್ಕವರು : ಜೈ.

(ಶಿಷ್ಯಗಣ ಎಲ್ಲರಿಗೂ ನಗುಮುಖದಿಂದ ನಮಸ್ಕಾರ ಮಾಡುತ್ತಾರೆ)

ಮೊದಲ ಶಿಷ್ಯ : ನಮಸ್ಕಾರ ಮಿತ್ರರೇ. ನಿಮ್ಮನ್ನು ನೋಡಿ ನಮಗೆ ತುಂಬ ಸಂತೋಷವಾಗಿದೆ. ಸ್ವಾಮಿ ಚೈತನ್ಯಕುಮಾರರು ಕೈಕೊಂಡ ಈ ಎರಡನೆಯ ಪ್ರಯೋಗವೂ ಹಿಂದಿನ ಪ್ರಯೋಗದಷ್ಟೇ ಯಶಸ್ವಿಯಾಗಿದೆ !

: (ಕುಳಿತವರಲ್ಲಿ ಒಬ್ಬವ) ಸ್ವಾಮಿ ಚೈತನ್ಯಕುಮಾರರೆಲ್ಲಿ ? ನಾವು ಅವರ ಸ್ವಾಗತಕ್ಕಾಗಿ ನಿಂತಿದ್ದೀವಿ.

ಎರಡನೆ ಶಿಷ್ಯ : ಸ್ವಾಮಿ ಚೈತನ್ಯ ಕುಮಾರರು ಸ್ವಾಗತ ಮಾಡುವ ಅವಕಾಶ ಇತರರಿಗೆ ಕೊಡುವುದಿಲ್ಲ. ಕೇವಲ ಬೀಳ್ಕೊಡುವ ಅವಕಾಶ ಮಾತ್ರ ಕೊಡುತ್ತಾರೆ. ನಾವು ಸ್ವಾಮಿಗಳ ಶಿಷ್ಯರು. ನಾವು ಅವರನ್ನು ಕರೆದೊಯ್ಯಲು ಬಂದಿದ್ದೇವೆ.

ಜನ : ಕರೆದೊಯ್ಯಲು ಬಂದಿದ್ದೀರಾ ? ಹಾಗಿದ್ರೆ ಅವರೆಲ್ಲಿದ್ದಾರೆ ?

ಮೂರನೆಯ ಶಿಷ್ಯ : ನಿಮ್ಮಲ್ಲಿದ್ದರು. ಈವತ್ತು ಇದ್ದರು. ನಿನ್ನೆ ಇದ್ದರು. ಮೊನ್ನೆ ಮತ್ತು ಹಿಂದಿನ ದಿನಗಳಲ್ಲಿ ಇಲ್ಲೇ ಇದ್ದರು.

: ಸ್ವಾಮಿ ಚೈತನ್ಯಕುಮಾರರು ನಮ್ಮಲ್ಲಿದ್ದರೆ ?

ಮೊದಲ ಶಿಷ್ಯ : ನಿಮ್ಮ ಕೈಯಲ್ಲಿರುವ ಪ್ರತೀಕವೇ ಹೇಳುತ್ತದೆ ಅವರು ನಿಮ್ಮಲ್ಲಿದ್ದರೂಂತ. ಅವರಿಲ್ಲದಿದ್ರೆ ನಿಮ್ಮಿಂದ ಈ ಕೆರೆ ಮಾಡಿಸಿಕೊಂಡವರು ಯಾರು ? ಯಾರು ಈ ಹೂ - ಹಣ್ಣಿನ ತೋಪು ಮಾಡಿಸಿ, ಕೊಂಡರು ? ನಿಮ್ಮ ಹತ್ತಿರ ನಿಮ್ಮ ರೆಟ್ಟೆಗಳಿದ್ದಿರಬಹುದು. ಆದರೆ ಅದರಲ್ಲಿ ಉಸಿರು ತುಂಬಿ ರಕ್ತ ಹರಿದಾಡಿಸಿದವರು ಅವರು. ಜಡವಾಗಿದ್ದ ನಿಮ್ಮ ದೇಹಗಳನ್ನು ಅವರು ಎದ್ದು ನಿಲ್ಲಿಸಿದರು. ಅವರು ನಿಮ್ಮಲ್ಲಿ ಚೈತನ್ಯ ತುಂಬಿದರು. ಸೃಷ್ಟಿಯ ಮೇಲೆ ಸೃಷ್ಟಿಸಿದವನ ಅಧಿಕಾರವಿರುತ್ತದೆ. ಚೈತನ್ಯವೇ ಆ ಅಧಿಕಾರ ಜಾಗೃತಗೊಳಿಸುತ್ತದೆ. ಅಧಿಕಾರದ ಮೇಲೆ ಆಕ್ರಮಣವಾದಾಗ ಚೈತನ್ಯವೇ ಮನುಷ್ಯನಲ್ಲಿ ಪ್ರತೀಕಾರ ಶಕ್ತಿ ಹುಟ್ಟಿಸುತ್ತದೆ. ನೀವೀಗ

ಉರಿದೆದ್ದಿದ್ದೀರಿ. ಇದೆಲ್ಲ ಕೆಲಸ ಸ್ವಾಮಿ ಚೈತನ್ಯಕುಮಾರರು ಮಾಡಿದ್ದೆ. ಸ್ವಾಮಿಗಳು ಎಲ್ಲಿದ್ದಾರೆ.

(ಜನ ಗಾಬರಿಗೊಳ್ಳುತ್ತಾರೆ. ಅಷ್ಟರಲ್ಲಿ ಅತ್ತ ಕಡೆಗೆ ಧಾವಿಸಿ ಹೋದ ಅಜ್ಜಯ್ಯ ಮರಳಿ ಬರುತ್ತಾರೆ)

ಅಜ್ಜಯ್ಯ : ನಾನು, ನಾನು ಅವರನ್ನು ಗುರುತಿಸಿದೆ. ಮೊದಲ ಬಾರಿ ನಾನು ನಮ್ಮ ತಪ್ಪಿಗೆ ಕ್ಷಮೆ ಕೇಳಿ ಅವರ ಕಾಲು ಹಿಡಿಯಲು ಹೋದಾಗ ಅವರು ಕಾಲಿನಿಂದಲೇ ದೂರಿ 'ಮನುಷ್ಯನಾಗಿ ಮನುಷ್ಯನ ಕಾಲು ಹಿಡಿಯುವುದೇ ?' ಅಂತ ಕೇಳಿದರು. ಇಂಥ ಮಾತುಗಳು ಸಂತರ ಪದವಿಗೇರಿದವರಿಂದ ಮಾತ್ರ ಬರಲು ಸಾಧ್ಯ. ಅಂದಿನಿಂದ ನಾನು ಅವರ ಪ್ರತಿಯೊಂದು ಚಟುವಟಿಕೆಯ ಮೇಲೂ ಕಣ್ಣಿಟ್ಟಿದ್ದೆ. ಈ ಹೊತ್ತು ಗೊತ್ತಾಯ್ತು ಅವರು ಬೇರೆ ಯಾರೂ ಅಲ್ಲ ಸಾಕ್ಷಾತ್ ಚೈತನ್ಯಕುಮಾರರು !

ಎರಡನೆಯ ಶಿಷ್ಯ : ಸ್ವಾಮಿಗಳು ತಮ್ಮ ಹೆಸರು ಏನೂಂತ ಹೇಳಿದ್ರು.

: ಅಂಕುಶ. ಪ್ರಯೋಜನವಿಲ್ಲದ ಹೆಸರು ಅಂತ ಅವರೇ ಹೇಳಿದ್ರು.

ಎರಡನೆಯ ಶಿಷ್ಯ : ಅಂಕುಶವಾಗಿಯೇ ಅವರು ನಿಮ್ಮನ್ನು ಕ್ಷಣಕ್ಷಣಕ್ಕೂ ಚುಚ್ಚಿರ ಬಹುದು.

ಅಜ್ಜಯ್ಯ : ಅವರು ನಮ್ಮನ್ನು ಜಾಗ್ರತಗೊಳಿಸಿದರು.

ಮೂರನೆಯ ಶಿಷ್ಯ : ಈಗ ಸ್ವಾಮಿಗಳು ಎಲ್ಲಿದ್ದಾರೆ ?

ಅಜ್ಜಯ್ಯ : ನಾನು ಅವರನ್ನು ಅಡ್ಡಗಟ್ಟಲು ತುಂಬ ಪ್ರಯತ್ನಿಸಿದೆ. ಗಾಳಿಯಲ್ಲಿ ಮತ್ತು ಅವರಲ್ಲಿ ಯಾವ ವ್ಯತ್ಯಾಸವೂ ಇರಲಿಲ್ಲ. ಸ್ವಾಮಿ ನಮ್ಮೂರಿನ ಸೀಮೆ ದಾಟಿ ಬೇರೆ ಊರಿಗೆ ಹೊರಟು ಹೋದರು.

ಮೊದಲ ಶಿಷ್ಯ : ಈಗ ಆ ಊರಿನಲ್ಲಿ ಅದೇ ರೀತಿಯ ಪ್ರಯೋಗ ಆರಂಭವಾಗ ಬಹುದು. ಇನ್ನೆಷ್ಟು ಕಾಲ ಬೇಕಾಗಿತ್ತೊ ದೇವರಿಗೇ ಗೊತ್ತು. ನಮ್ಮ ತಿರುಗಾಟ ವ್ಯರ್ಥವಾಯಿತು. ನಾವು ಬಂದ ದಾರಿಯಲ್ಲಿ ಹಿಂತಿರುಗಿ ಹೋಗಬೇಕಾಗಿದೆ. ಜಗತ್ತಿನಲ್ಲಿ ಎಷ್ಟೋ ಸ್ವಾಮಿ ಗಳಿದ್ದಾರೆ. ಆದರೆ ಇಂಥ ಸ್ವಾಮಿಗಳು ಎಷ್ಟಿದ್ದಾರೆ. ಕೆಲವರು ಮಾತ್ರ ಇರಬಹುದು.

ಅಜ್ಜಯ್ಯ : ಸ್ವಾಮಿ ನಮಗೆ ಬಿಟ್ಟು ಹೋದರು. ಆದರೆ ಅವರು ನಮ್ಮ ಬದುಕಿನಲ್ಲಿ ಉತ್ಸಾಹ ತುಂಬಿದರು. ಬದುಕಿನ ಮೇಲೆ ಅಧಿಕಾರ ಹೇಳಿಕೊಳ್ಳುವಂತಹ ಉತ್ಸಾಹ ತುಂಬಿದರು. ನಾವು ಈ ಕಲ್ಲುಗಳಿಂದ ಸ್ವಾಮಿಗಳ ಮಠ ಕಟ್ಟುತ್ತೇವೆ. ಸ್ವಾಮಿ ಚೈತನ್ಯ ಕುಮಾರರ ಮಠ. ಅವರ ನೆನಪಿಗಾಗಿ.

ಮೊದಲ ಶಿಷ್ಯ : ಬೇಡ - ಇಂಥ ಹುಚ್ಚಾಟ ಮಾಡಬೇಡಿ. ಹಾಗೆ ಮಾಡಿದರೆ ಸ್ವಾಮಿ ಚೈತನ್ಯಕುಮಾರರ ಕಾರ್ಯ ಮಣ್ಣಿನಲ್ಲಿ ಮುಚ್ಚಿ ಹಾಕಿದಂತಾಗುತ್ತದೆ. ಜೀವವಿಲ್ಲದ ಕಲ್ಲುಗಳ ಗೋಡೆ ಕಟ್ಟಿ ಚೈತನ್ಯಕುಮಾರರನ್ನು ಬಂದಿಯನ್ನಾಗಿ ಮಾಡಬೇಡಿ. ಚೈತನ್ಯ ಬೀಸುವ ಗಾಳಿಯಲ್ಲಿ, ಜುಳು ಜುಳು ಹರಿಯುವ ನೀರಿನಲ್ಲಿ, ಮೈಯಲ್ಲಿ ಹರಿದಾಡು ರಕ್ತದಲ್ಲಿ ತುಂಬಿಕೊಂಡಿದೆ. ನಿಜವಾಗಿ ಹೇಳಬೇಕಂದ್ರೆ ಚೈತನ್ಯಕ್ಕೆ ಮಠವಿಲ್ಲ, ನಾವು ಬರ್ತೀವಿ.

(ಘೋಷಣೆ ಹಾಕುತ್ತ ಬಂದ ದಾರಿಯಲ್ಲಿ ಹಿಂತಿರುಗಿ ಹೋಗುತ್ತಾರೆ. ಊರಿನ ಎಲ್ಲ ಜನ ನಮ್ರತೆಯಿಂದ ಕೈಜೋಡಿಸಿ ಎದ್ದು ನಿಲ್ಲುತ್ತಾರೆ. ಎಲ್ಲರೂ ಒಂದೇ ದನಿಯಲ್ಲಿ 'ಜಯ' ಎನ್ನುತ್ತಾರೆ.)



# ಶ್ರೀ ವಿಚಿತ್ರದ ಜಾತ್ರೆ

(ಒಂದು ನದಿಯ ದಂಡೆಯ ಮೇಲೆ ಕಲ್ಲಿನಿಂದ ಕಟ್ಟಿದ ಘಾಟ. ಅಲ್ಲಿದೆ ಶ್ರೀ ವಿಚಿತ್ರದ ಮಂದಿರ. ಇಲ್ಲಿಯೇ ಜಾತ್ರೆ ಸೇರುತ್ತದೆ. ಮಂದವಾದ ಬೆಳಕಿನಲ್ಲಿ ಕಲ್ಲುಗಳು ಗುಡ್ಡೆ ಬಿದ್ದಿರುವುದು ಕಾಣುತ್ತದೆ-ಸುತ್ತಲೂ ನಿಸರ್ಗ. ಕೆಲವು ಸಮಯದ ನಂತರ ರಚಕ ಹೊರಗೆ ಬರುತ್ತಾನೆ. ಪ್ರೇಕ್ಷಕರನ್ನು ಉದ್ದೇಶಿಸಿ ಮಾತನಾಡುತ್ತಾನೆ.)

ರಚಕ : ನಿಜವಾಗಿ ಹೇಳಬೇಕೂಂದ್ರೆ ಯಾವುದೇ ಕಲಾಕೃತಿಯನ್ನು ಸಾದರ ಪಡಿಸುವಾಗ ಅದರ ಸೃಷ್ಟಿಕರ್ತ ಕಾಣಿಸಿಕೊಳ್ಳುವ ಅಗತ್ಯ ವಿರುವುದಿಲ್ಲ. ಆದರೆ ಈ ಕಲಾಕೃತಿಯ ಬಗ್ಗೆ ಹಾಗೆ ಹೇಳಲು ಬರುವುದಿಲ್ಲ. ಅದಕ್ಕೇ ನಾನು, ಈ ಕಲಾಕೃತಿಯ ಸೃಷ್ಟಿಕರ್ತ ನಿಮ್ಮ ಮುಂದೆ ಬಂದು ನಿಂತಿದ್ದೇನೆ. ನಮ್ಮ ನಡುವೆ ನೀವು 'ಬಿದ್ದ ಹಲ್ಲಿನಂತೆ' ನೀವೇಕೆ ನಿಂತಿದ್ದೀರಿ ಎಂದು ಕೇಳಬಹುದು. ಬಿದ್ದಹಲ್ಲಿನ ಉದಾಹರಣೆ ಯಾಕೆ ಕೊಟ್ಟೆ ಅಂದ್ರೆ ಈಗ ನಿಮ್ಮ ಮುಂದೆ ಒಂದು ದಂತಕಥೆ ಇಡುವವನಿದ್ದೇನೆ. ಚಿಕ್ಕಂದಿನಿಂದಲೂ ನಾನು ಈ ಕಥೆ ಅವರಿವರ ಬಾಯಿಯಿಂದ ಕೇಳ್ತಾ ಬಂದಿದ್ದೀನಿ. ವಾಸ್ತವಿಕತೆಯ ಕಲ್ಲಿನ ಮೇಲೆ ಉಜ್ಜಿದರೆ ಈ ಕಥೆ ನಿಮ್ಮ ಹಲ್ಲಿಗೂ ತಾಕುವುದಿಲ್ಲ. ಈ ದಂತಕಥೆ ಒಂದು ಜಾತ್ರೆಯದು. ಅದು ಶ್ರೀ ವಿಚಿತ್ರದ ಜಾತ್ರೆ. ಮುಂದೆ ಕಾಣ್ತಾ ಇದೆಯಲ್ಲ...ಅದಲ್ಲ...ಇಲ್ಲಿ ಹಿಂದಕ್ಕಿರುವ ಬೆಟ್ಟದ ಮೇಲೆ ಶ್ರೀ ವಿಚಿತ್ರನ ಮಂದಿರವಿದೆ. ನದಿಯ ದಂಡೆಯ ಮೇಲೆ ಈ ಬೆಟ್ಟವಿದೆ. ಜಾತ್ರೆ ಇಲ್ಲೇ ಕೂಡುತ್ತದೆ. ಜಾತ್ರೆಗೆ ಬರುವ ಜನ ಗುಡ್ಡ ಹತ್ತಿ ಇಳಿದು ಬರುತ್ತಾರೆ. ಇಲ್ಲವೆ ಸಮುದ್ರ ಮಾರ್ಗವಾಗಿ ದೋಣಿಯಲ್ಲೂ ಬರ್ತಾರೆ. ಈಗ ಸೇರಿದ ಈ ವಿಚಿತ್ರದ ಜಾತ್ರೆ ಕೊನೆಯ ಜಾತ್ರೆ. ನೀವೀಗ ನೋಡುತ್ತಿರುವ ದೃಶ್ಯ ಜಾತ್ರೆಯ ಮುಕ್ತಾಯದ ದೃಶ್ಯ. ನೀವು ಈಗ ದಿಗಿಲುಗೊಂಡಿರಬಹುದು. ಈ ಬೆಟ್ಟದ ಮೇಲೆ ಕಾಣುವ ಈ ಆಕೃತಿಗಳೆಲ್ಲ ಕಲ್ಲು ಬಂಡೆಯಂತೆ ನಿಮಗೆ ಕಾಣಿಸುತ್ತಿರಬಹುದು. ನಿಮಗೊಂದು ಮಾತು ಕೇಳ್ತೀನಿ. ನಿಮಗೆ ಆಕಾಶದಲ್ಲಿರೋ ಮೋಡಗಳನ್ನು ವೀಕ್ಷಿಸುವ ಅಭ್ಯಾಸ ವುಂಟೆ ? ಮುಗಿಲಿನಲ್ಲಿ ಕಾಣುವ ಹತ್ತಿಯ ಮೋಡಗಳನ್ನು ದಿಟ್ಟಿಸಿ

ನೋಡ್ತಾ ಇದ್ದರೆ ನಿಮಗೇನನಿಸುತ್ತೆ ? ಬೇರೆ ಬೇರೆ ಆಕಾರದ ಆಕೃತಿಗಳು ಆನೆ, ಒಂಟೆ, ಕುದುರೆ, ನವಿಲು, ಚಿಗರೆ, ಕರಡಿ ಒಂದೊಂದಕ್ಕೂ ಒಂದೊಂದು ಆಕಾರ. ಹೀಗೆ ನೋಡ್ತಾ ನೋಡ್ತಾ ಇದ್ರೆ ತುಂಬ ಮಜವಾಗಿರತ್ತೆ. ಎಂಥ ಸೋಜಿಗ. ನೀವು ಮನಸ್ಸಿನಲ್ಲಿ ಯೋಚಿಸಿದ ಆಕೃತಿ ಅಲ್ಲಿ ಆಕಾರ ಪಡೀತಾ ಇರತ್ತೆ. ಅದೇ ರೀತಿಯ ಪ್ರಯೋಗ ಇಲ್ಲೂ ಮಾಡಿನೋಡಿ. ಈ ಬೆಟ್ಟದ ಮೇಲಿರುವ ಆಕೃತಿಗಳೆಲ್ಲ ಮನುಷ್ಯಾಕೃತಿಗಳೇ. ಮೊದಲು ನೀವು ನಿಮಗೆ ಯಾವ ಆಕೃತಿ ಬೇಕು ಅಂತ ಮನಸ್ಸಿನಲ್ಲೇ ಗುರುತು ಮಾಡಿಕೊಳ್ಳಿ. ಆಮೇಲೆ ಆ ಆಕೃತಿಗಳೆಲ್ಲ ಒಂದಾಗಿ ಬಿಟ್ಟರೆ ಜಾತ್ರೆ ತಾನಾಗಿಯೇ ನಡೆಯುತ್ತದೆ. ಕಥೆ ತಾನಾಗಿ ಅರಳುತ್ತದೆ.

(ರಚಕ ಕಣ್ಮರೆಯಾಗುತ್ತಾನೆ. ಬೆಟ್ಟದ ಮೇಲೆ ನಿಧಾನವಾಗಿ ಬೆಳಕು ಚೆಲ್ಲುತ್ತದೆ. ಆ ಬೆಳಕಿನಲ್ಲಿ ಮನುಷ್ಯಾಕೃತಿಗಳು ಕಾಣತೊಡಗುತ್ತವೆ. ಅಲ್ಲಿ ನಡೆಯುವ ಚಟುವಟಿಕೆಗಳಿಗೆ ಜಾತ್ರೆಯ ಸ್ವರೂಪ ಬಂದಿರುತ್ತದೆ. ದೋಣಿಗಳಲ್ಲಿ ಜನ ಬರುತ್ತಾರೆ. ಕೆಲವರ ತಲೆಯ ಮೇಲೆ, ಹೆಗಲ ಮೇಲೆ ಗಂಟುಮೂಟೆ, ಗುಡ್ಡದ ಮೇಲಿಂದ ಬಂದವರು ಈ ಗುಂಪಿನಲ್ಲಿ ಸೇರಿ ಕೊಳ್ಳುತ್ತಾರೆ. ಜನರ ಗುಂಪಿನಲ್ಲಿ ಎದ್ದು ಕಾಣುವ ಕೆಲವು ಜನ-ಹರಕು ಬಟ್ಟೆ ಧರಿಸಿದ ಕುಂಟ-ಭಿಕ್ಷುಕ, ಕತ್ತಿನಲ್ಲಿ ಢೋಲಕ ಇಳಿಬಿಟ್ಟು ಕೋತಿ ಯಾಡಿಸುವವ, ತಲೆಯ ಮೇಲೆ ಗಂಟನಿಟ್ಟುಕೊಂಡು ಬರುವ ಹುಡುಗ, ಅವನ ಹಿಂದೆ ಬರುವ ಅವನ ಧನಿ. ಒಬ್ಬ ಸರ್ವಸಾಮಾನ್ಯ ತಂದೆ. ಈ ವಾತಾವರಣ ನೋಡಿ ಮರುಳಾದ ಅವನ ಹದಿನೇಳು ಹದಿನೆಂಟು ವರ್ಷದ ಹುಡುಗಿ (ಮಗಳು). ಅವಳ ಹಿಂದೆ ನಡೆದು ಬರುವ ಒಬ್ಬ ಪಡ್ಡೆ ಹುಡುಗ. ಗರತಿಯಂತೆ ಕಾಣುವ ಹೆಣ್ಣು ಮಗಳೊಬ್ಬಳು. ಅವಳ ಮೇಲೆ ಹೆಜ್ಜೆ ಹೆಜ್ಜೆಗೂ ಸಂಶಯ ಪಡುವ ಅವಳ ಗಂಡ. ಕಳೆದು ಹೋದವನನ್ನು ಹುಡುಕುತ್ತಿರುವ ಒಬ್ಬ ಮುದುಕಿ. ಸಮಾಜ ಸೇವಕನಂತೆ ಉಡುಪು ಧರಿಸಿದವನೊಬ್ಬ, ಹೆಗಲಿಗೆ ಚೀಲ ಜೋತು ಬಿಟ್ಟ ಸಮಾಜ ಸೇವಕ, ಈ ಜನಸಂಣಿಯಲ್ಲಿ ಪ್ರತಿಷ್ಠಿತನಂತೆ ಓಡಾಡುವವನೊಬ್ಬ, ಈ ಎಲ್ಲ ಜನರಲ್ಲಿಯೂ ಭಿನ್ನವಾಗಿ ತೋರುವ ಎಲ್ಲ ಕಡೆಗೂ ಓಡಾಡುವ ಯಾರೋ ಒಬ್ಬ ವ್ಯಕ್ತಿ. ಜನಜಾತ್ರೆಯಲ್ಲಿ ಈ ಕೆಳಗಿನ ಮಾತುಗಳು ಕೇಳಿ ಬರುತ್ತವೆ.)

: ಏನಪ್ಪ...ಒಂದು ವರ್ಷವಾಗಿ ಹೋಯ್ತಲ್ಲ ನಿನ್ನ ಭೇಟಿಯಾಗಿ.

: ಶ್ರೀವಿಚಿತ್ರದ ಕೃಪೆ.

: ಈ ಬಾರಿ ಮಿಠಾಯಿ ಅಗ್ಗವಾಗ್‌ಬಹುದೇ ?
: ಅಗ್ಗ ? ಯಾರು ಹೇಳಿದ್ರು ?
: ಕಡ್ಲೆ ಸೇರಿಗೆಷ್ಟು ?
: ಮೊದಲು ನಿನ್ನ ಹಲ್ಲು ನೋಡಿಕೊ.
: ಅಪ್ಪಾ, ಕೊಂಚ ಆಚೆಗೆ ಸರೀತೀರಾ ? ನನಗೆ ಒಂದು ಕಾಲಿಲ್ಲ.
: ನಿಮಗೆ ಕುಂಟರಿಗ್ಯಾಕಪ್ಪ ಜಾತ್ರೆ ಗೀತ್ರೆ.
: ನೀವು ನನ್ನ ಕೋತಿ ನೋಡಿದ್ರಾ ?
: ನಾನು ನಿಮ್ಮನ್ನು ಮೊದಲ ಬಾರಿ ನೋಡ್ತಾ ಇದ್ದೀನಿ.
: ನಾನಿಮ್ಗೆ ಹೇಳ್ತೀನಿ, ಸಮಾಜ ಸೇವೆಯಂಥ ವ್ರತ ಬೇರೊಂದಿಲ್ಲ.
: ಈ ದಂಧೆಯಲ್ಲಿ ಏನ್ ಸಿಗುತ್ತೆ ?
: ಈ ಹೊರೆ ನನ್ಗೆ ಭಾರವಾಗಿದೆ.
: ಏನ್ ಭಾರ ? ಇನ್ನೂ ಹುಡುಗ ನೀನು.
: ನನ್ಗೆ ಮಿಠಾಯಿ ತುಂಬಾ ಹಿಡಿಸುತ್ತೆ.
: ನೀನೊಬ್ಬ ಹೊಟ್ಟೆಬಾಕ, ತಿನ್ನೋಕೆ ಹುಟ್ಟಿದವ್ನು.
: ಈ ಜನಗಳ ಜೊತೆ ಸೇರೋದಂದ್ರೆ ಇದ್ದ ಪ್ರತಿಷ್ಠೆ ಕಳಕೊಂಡ ಹಾಗೆ.
: ಆದ್ರೆ ಏನ್ ಮಾಡೋದು ಪದ್ಧತಿಯಂತೆ ನಿನ್ನ ಕೆಲ್ಸ ನೀನ್ ಮಾಡ್ಲೇಬೇಕು.
: ಈ ವರ್ಷ ನನ್ಗೆ ಸಿಗ್ತಾನೆ.
: ಶ್ರೀ ವಿಚಿತ್ರನ ಕೃಪೆ.

(ಈ ರೀತಿ ಸಂಭಾಷಣೆ ಬೆಳೆಯುತ್ತ ಹೋಗುತ್ತವೆ. ಕೆಲವು ಸಂಭಾಷಣೆಗಳು ಸಿಕ್ಕುಸಿಕ್ಕಾಗುತ್ತವೆ. ಗದ್ದಲ ಹೆಚ್ಚಾಗುತ್ತದೆ. ಒಂದು ಬದಿಯಲ್ಲಿ ಇಬ್ಬರು ಮಾತಾಡುತ್ತಾರೆ)

ಮೊದಲನೆಯವ : ಈ ಜಾತ್ರೆ ಅಂದ್ರೆ ಮೋಜಿನ ಜಾತ್ರೆ ಅಲ್ವೆ ?
ಎರಡನೆಯವ : ಎಂಥಾ ಮೋಜು ?
ಮೊದಲನೆಯವ : ಈ ಜಾತ್ರೆ ಸಮುದ್ರ ದಂಡೆಯಲ್ಲಿ ಸೇರುತ್ತದೆ.
ಎರಡನೆಯವ : ನೀನು ಇಲ್ಲಿ ಹೊಸದಾಗಿ ಬಂದಿದ್ದೀಯೊ ?
ಮೊದಲನೆಯವ : ಹೌದು. ಇದೇ ಮೊದಲ ಬಾರಿ ಬಂದಿದ್ದೀನಿ.
ಎರಡನೆಯ : ನೀನು ಮೇಲೆ ಹೋಗಿದ್ದೀಯಾ ?
ಮೊದಲನೆಯವ : ಮೇಲೆ ? ಎಲ್ಲಿ ?

ಎರಡನೆಯವ : ಮೇಲೆ ಅಂದ್ರೆ ಬೆಟ್ಟಕ್ಕೆ. ಅಲ್ಲಿ ಒಂದು ಗುಡಿ ಇದೆ. ಅದೊಂದು ಮಜಾ.

ಮೊದಲನೆಯವ : ಹೌದು. ಇಂಥ ಬೆಟ್ಟದ ಮೇಲೆ ಗುಡಿಗಳನ್ನು ನಾನು ಸಾಕಷ್ಟು ನೋಡಿದ್ದೀನಿ. ಮಾರುತಿ ಮಂದಿರಗಳು ಹೆಚ್ಚಾಗಿ ಬೆಟ್ಟದ ಮೇಲೇ ಇರ್ತವೆ. ಅದರಲ್ಲೇನ್ ಬಂತು ಮಜಾ ?

ಎರಡನೆಯವ : ಮಜಾ ಅಂದ್ರೆ ಗುಡೀದಲ್ಲ....ದೇವರದ್ದು.

ಮೊದಲನೆಯವ : ಅದೇನು ಮಜಾ ?

ಎರಡನೆಯವ : ಈ ದೇವರು ಇತರ ದೇವರಂತೆ ಅಲ್ಲ. ಅವನ ಕಾಲುಗಳು ಹೀಗೆ (ಕತ್ತು ಹೊರಳಿಸಿ) ತಲೆ ಹೀಗೆ.

ಮೊದಲನೆಯವ : ಹೀಗೇನು ?

ಎರಡನೆಯವ : ಪಲ್ಲಕ್ಕಿ ನೋಡಿದ್ರಾ ?

ಮೊದಲನೆಯವ : ಇಲ್ಲ.

ಎರಡನೆಯವ : ಅದೊಂದು ತಮಾಷೆ.

ಮೊದಲನೆಯವ : ಹೇಗೆ ?

ಎತರಡನೆಯವ : (ಮೂರನೆಯವನಿಗೆ) ಏಯ್...ದೇವರ ಪಲ್ಲಕ್ಕಿ ಬೆಟ್ಟಕ್ಕೆ ಬಂದು ಹೋಯ್ತೆ ?

ಮೂರನೆಯವ : ಇಲ್ಲ.

ಎರಡನೆಯವ : ಈಗ ದೇವರು ಪಲ್ಲಕ್ಕಿಯಲ್ಲಿ ಕುಳಿತು ಸಮುದ್ರ ಸ್ನಾನಕ್ಕೆ ಬಂದಾಗ ಮಜಾ ನೋಡು. ಇಲ್ಲೇ ನಿಂತು ನೋಡು. ಇಲ್ಲಿಂದಲೇ ಸರಿಯಾಗಿ ಕಾಣುತ್ತೆ.

ಮೊದಲನೆಯವ : ನೀನ್ ಹೇಳಿದ್ದು ಒಳ್ಳೇದಾಯ್ತು.

ಎರಡನೆಯವ : ನಿನ್ನ ಹತ್ರ ಚಿಲ್ರೆ ಇದೆಯಲ್ಲ.

ಮೊದಲನೆಯವ : ಹೌದು.....ಇದೆ. ಯಾಕೆ ?

ಎರಡನೆಯವ : ದೇವರಿಗೆ ಹಾಕಲಿಕ್ಕೆ, ನನ್ನ ಹತ್ರ ಏನೂ ಇಲ್ಲ.

ಮೊದಲನೆಯವ : ನಾನು ಕೊಡ್ತೀನಿ. (ಅವನ ಕೈಯಲ್ಲಿ ಚಿಲ್ಲರೆ ಇಡುತ್ತಾನೆ.)

ಎರಡನೆಯವ : ನೀನು ಹೊಸದಾಗಿ ಬಂದಿದ್ದೀಯಲ್ಲ. ಈ ಗಲಾಟೆಯಲ್ಲಿ ದೇವರ ದರ್ಶನಕ್ಕೆ ನಿನ್ನಿಂದ ಹೋಗಲಿಕ್ಕೆ ಆಗಲಿಕ್ಕಿಲ್ಲ.

ಮೊದಲನೆಯವ : ಯಾಕೆ ಹಾಗಂತೀ ?

ಎರಡನೆಯವ : ಒಂದ್ಕೆಲಸ ಮಾಡು ಈ ಚಿಲ್ರೆ ನನ್ನ ಕೈಗೇ ಕೊಡು. ನಿಮ್ಮ ಪರವಾಗಿ ನಾನೇ ದೇವರಿಗೆ ಹಾಕ್ತೀನಿ.

ಮೊದಲನೆಯವ : ಹಾಗೇಮಾಡು. ನನ್ನದೇನು ತಕರಾರಿಲ್ಲ.

(ಅವನ ಕೈಗೆ ಹಣ ಕೊಡುತ್ತಾನೆ. ಆತ ಹಣ ಪಡೆದು ಅಲ್ಲಿಂದ ಮಾಯವಾಗುತ್ತಾನೆ. ಇವರಿಬ್ಬರ ಸಂಭಾಷಣೆಯನ್ನು ದೂರದಲ್ಲಿ ನಿಂತು ಕೇಳುತ್ತಿದ್ದ 'ಯಾರೊ ಒಬ್ಬ' ಅವನ ಹತ್ತಿರ ಬಂದು ಮಾತಾಡಿಸುತ್ತಾನೆ.)

ಯಾರೊ ಒಬ್ಬ : ನಿನ್ಗೆ ಈಗ ಗೊತ್ತಾಯ್ತಲ್ಲ.

ಮೊದಲನೆಯವ : ಏನು ?

ಯಾರೊ ಒಬ್ಬ : ಆತ ನಿನ್ಗೆ ಟೋಪಿ ಹಾಕ್ದ.

ಮೊದಲನೆಯವ : ಹೇಗೆ ?

ಯಾರೊ ಒಬ್ಬ : ದೇವರ ದರ್ಶನಕ್ಕೆ ಹೋಗುವವರು ದೇವರಿಗೆ ಹಣ ಹಾಕಬೇಕಂತಿಲ್ಲ. ಹೂವು-ಹಣ್ಣು ಊದಬತ್ತಿಯಿದ್ರೆ ಸಾಕು.

ಮೊದಲನೆಯವ : ದುಡ್ಡು ಹಾಕೋದಿಲ್ಲ ಯಾಕೆ ?

ಯಾರೊ ಒಬ್ಬ : ಆ ಆಖ್ಯಾಯಿಕೆ ನಿನಗೆ ಗೊತ್ತಿಲ್ಲವೆ ?

ಮೊದಲನೆಯವ : ಯಾವ ಆಖ್ಯಾಯಿಕೆ ?

ಯಾರೊ ಒಬ್ಬ : ಈ ದೇವರ ಕತ್ತಿನ ವಿಷಯ.

ಮೊದಲನೆಯವ : ಗೊತ್ತಿಲ್ಲ.

ಯಾರೊ ಒಬ್ಬ : ತುಂಬ ವರ್ಷಗಳ ಹಿಂದೆ ಈ ದೇವರ ಕತ್ತು ಈ ರೀತಿ ಹೊರಳಿರಲಿಲ್ಲ. ಇತರ ದೇವರಂತೆ, ನಮ್ಮನಿಮ್ಮಂತೆ ಸರಿಯಾಗಿತ್ತು. ಆದರೆ ಈ ದೇವರಿಗೊಂದು ಕೆಟ್ಟ ಚಾಳಿಯಿತ್ತು. ಈತ ಇತರರ ಕನಸಿನಲ್ಲಿ ಹೋಗಿ ಮನಸ್ಸಿಗೆ ಬಂದಿದ್ದನ್ನೆಲ್ಲ ಬೇಡ್ತಿದ್ದ.

ಮೊದಲು : ತನಗೆ ಬೇಕಾದದ್ದು ಕೇಳ್ತಿದ್ದನೆ ?

ಯಾರೊಬ್ಬ : ಬೇಕಾದದ್ದು ಅಂದ್ರೆ ಆ ಮನುಷ್ಯನಲ್ಲಿ ಏನಿದೆಯೋ ಅದನ್ನು ಕೇಳ್ತಿದ್ದ. ಬಟ್ಟೆಯಾದ್ರೆ ಬಟ್ಟೆ, ಮಗು ಆದ್ರೆ ಮಗು.

ಮೊದಲನೆಯವ : ದೇವರು ಕೇಳ್ತಿದ್ದ ವಸ್ತು ಅವನಿಗೆ ಯಾವಾಗ ತಂದು ಕೊಡಬೇಕಾಗುತ್ತಿತ್ತು ?

ಯಾರೋ ಒಬ್ಬ : ಜಾತ್ರೆಯ ದಿನ.

ಮೊದಲನೆಯವ : ಅಂದ್ರೆ.....ಈ ಹೊತ್ತು.

ಯಾರೋ ಒಬ್ಬ : ಆದರೆ ದೇವರದ್ದೊಂದು ಒಳ್ಳೆಯ ಗುಣ ಇತ್ತು. ಆತ ಕನಸಿನಲ್ಲಿ ಕಾಲಿಡುವಾಗ ಜಾತಿ, ಮತ, ಧರ್ಮ ನೋಡುತ್ತಿರಲಿಲ್ಲ. ಆದರೆ ಭಟ್ಟರು ಮಾತ್ರ ಆ ವಸ್ತು ತಗೊಳ್ಳುವಾಗ ತೊಳೆದು ತಗೋತಿದ್ರು.

ಮೊದಲನೆಯವ : ಎಲ್ಲರೂ ತಂದ ವಸ್ತುಗಳನ್ನೆಲ್ಲ ತೊಳೆದು ತಗೋತಿದ್ನೆ ?

ಯಾರೋ ಒಬ್ಬ : ಹೌದು. ಬಟ್ಟೆಯಾದ್ರೆ, ಬಟ್ಟೆ, ಮನುಷ್ಯರಾದ್ರೆ ಮನುಷ್ಯರು. ಒಂದು ವರ್ಷ ಭಟ್ಟರು ಸಕ್ರೇನೂ ತೊಳೆದು ತಗೊಂಡ್ರು.

ಮೊದಲನೆಯವ : ಕತ್ತಿನ ವಿಷಯ.

ಯಾರೋ ಒಬ್ಬ : ಒಂದು ದಿನ ದೇವರು ಒಂದು ಬಡಮುದುಕಿಯ ಮನೆಗ್ಹೋದ.

ಮೊದಲನೆಯವ : ನಿದ್ದೆಯಲ್ಲಿ ?

ಯಾರೋ ಒಬ್ಬ : ಹೌದು. ಬಡವರಿಗೆ ಚೆನ್ನಾಗಿ ನಿದ್ದೆ ಬೀಳುವುದರಿಂದ ದೇವರು ಮುದುಕಿಯ ಕನಸಿನಲ್ಲಿ ಸಲೀಸಾಗಿ ನುಸುಳಿ ಬಿಟ್ಟ. ದೇವರು ಅವಳಲ್ಲಿ ಏನ್ ಕೇಳಬೇಕು?

ಮೊದಲನೆಯವ : ಏನ್ ಕೇಳ್ದ ?

ಯಾರೋ ಒಬ್ಬ : ಅವಳ ಹತ್ರ ಒಂದು ದಪ್ಪ ತಾಮ್ರದ ದುಡ್ಡಿತ್ತು. ಆಗ ಅದು ಚಲಾವಣೆಯಲ್ಲಿರಲಿಲ್ಲ. ಮುಂದೊಂದು ದಿನ ಚಲಾವಣೆಗೆ ಬರ್‌ಬಹುದು. ಅಂತ ಜೋಪಾನವಾಗಿ ಮುದುಕಿ ಇಟ್ಟು ಕೊಂಡಿದ್ಲು. ದೇವರು ಆಕೆಯ ಬಳಿ ಇರೋ ಆ ದುಡ್ಡನ್ನೇ ಕೇಳ ಬೇಕೆ? ಅವಳ ಪಿತ್ತ ಕೆದರಿತು.

ಮೊದಲನೆಯವ : ಅವಳು ದುಡ್ಡು ಕೊಡಲಿಲ್ಲ, ಅಲ್ವೆ ?

ಯಾರೋ ಒಬ್ಬ : ಕೊಟ್ಟಳು. ಸುಲಭವಾಗಿ ಅಲ್ಲ. ಅವಳು ಜಾತ್ರೆಯ ದಿನ ಬಂದಳು ಮತ್ತು 'ಠಣ್' ಅಂತ ದೇವರ ಮುಂದೆ ಕುಕ್ಕಿದ್ಲು. ಏನ್ ಮೋಜು ಅಂತೀರಾ...ಆ ದುಡ್ಡು ನಡೆಯ ತೊಡಗಿತು !

ಮೊದಲನೆಯವ : ಅಂದ್ರೆ ?

ಯಾರೋ ಒಬ್ಬ : ದುಡ್ಡು ಚಕ್ರದಂತೆ ಗೋಲಾಕಾರವಾಗಿತ್ತು. ಚಕ್ರದ ಹಾಗೆ ಸುತ್ತಲು ಆರಂಭಿಸಿತು. ಕಾಲಿನಿಂದ ಹೊಟ್ಟೆಯ ಮೇಲೆ, ಹೊಟ್ಟೆಯಿಂದ ಎದೆಯ ಮೇಲೆ, ಎದೆಯಿಂದ ಕತ್ತಿಗೆ, ಕತ್ತಿನಿಂದ ಗದ್ದದ ಮೇಲೆ, ಗದ್ದದಿಂದ ತುಟಿಯ ಮೇಲೆ, ಮೀಸೆಯಿಂದ ಮೂಗಿನ ತುದಿಗೆ, ಮೂಗಿನ ತುದಿಯಿಂದ ಹಣೆಗೆ, ಹಣೆಯಿಂದ ತಲೆಗೆ, ತಲೆಯಿಂದ ಹಿಂದಕ್ಕೆ ಸರಿದು ಠಣಕ್ಕನೆ ನೆಲಕ್ಕಪ್ಪಳಿಸಿತು. ಆಗ ದೇವರು ದಿಗಿಲು ಗೊಂಡು ಹಿಂದೆ ತಿರುಗಿ ನೋಡಿದ. ದುಡ್ಡು ದೇವರ ಹಿಂದೆ ಬಿದ್ದು ಚಲಿಸತೊಡಗಿತು. ಅನ್ಯರ ಆಶೆಯ ದುಡ್ಡು ಒಂದು ಕಡೆ ನಿಲ್ಲುವುದುಂಟೆ ? ಅದು ಈಗಲೂ ನಡೀತಾನೇ ಇದೆಯಂತೆ.

ಮೊದಲನೆಯವ : ಮತ್ತು ದೇವರ ಕತ್ತು.

ಯಾರೊ ಒಬ್ಬ : ದೇವರು ದುಡ್ಡು ನೋಡ್ತಾ ನೋಡ್ತಾ ಆ ಕಡೆಗೆ ಮುಖ ಹೊರಳಿಸಿದ್ದ. ಜನ ಇತ್ತ ಕಡೆ ಮುಖ ಹೊರಳಿಸಬಹುದೂಂತ ಕಾದು ನಿಂತ್ರು. ಆದರೆ ದೇವರು ಇತ್ತ ಮತ್ತೆ ನೋಡ್ಲೇ ಇಲ್ಲ. ಜನ

ಬೇಜಾರಾಗಿ ಮನೆಗೆ ಹೋದ್ರು. ಅಷ್ಟರಲ್ಲಿ ಮುಸ್ಸಂಜೆಯಾಯ್ತು. ಕತ್ತಲಾಯ್ತು. ಏನಾಗಬೇಕೊ ಅದೇ ಆಯ್ತು.

ಮೊದಲನೆಯವ : ಏನು ?

ಯಾರೋ ಒಬ್ಬ : ಸೂರ್ಯಾಸ್ತವಾದ ಮೇಲೆ ಇಲ್ಲಿ ಏನ್ ನಡೆಯತ್ತೆ ಗೊತ್ತಿಲ್ವೆ ?

ಮೊದಲನೆಯವ : ಇಲ್ಲ.

ಯಾರೋ ಒಬ್ಬ : ಸೂರ್ಯಾಸ್ತದ ವೇಳೆ ಯಾವ ವಸ್ತು ಹೇಗಿರುತ್ತೋ ಹಾಗೆ ನಿಂತು ಬಿಡುತ್ತೆ. ದೇವರ ಕತ್ತು ಅಲ್ಲೆ ನಿಂತ್ಹೋಯ್ತು. ನೀವು ಮೇಲೆ ಹೋಗಿ ಗುಡಿ ನೋಡಿ ಬಂದ್ರಾ ?

ಮೊದಲನೆಯವ : ಇಲ್ಲ. ನಾನಿಲ್ಲಿ ಮೊದಲ ಬಾರಿ ಬಂದಿದ್ದೀನಿ.

ಯಾರೋ ಒಬ್ಬ : ದೇವಾಲಯದ ಮಧ್ಯೆ ಗರ್ಭಗುಡಿ ಇದೆ. ಆ ಗರ್ಭಗುಡಿಯಲ್ಲಿ ದೇವರಿದ್ದಾನೆ. ಎರಡೂ ಕಡೆ ಬಾಗಿಲುಗಳಿವೆ. ಒಂದು ಬಾಗಿಲಿನಿಂದ ಹೋದ್ರೆ ದೇವರ ಕಾಲುಗಳ ದರ್ಶನವಾಗುತ್ತದೆ. ಇನ್ನೊಂದು ಬಾಗಿಲಿನಿಂದ ಹೋದ್ರೆ ಮುಖದರ್ಶನವಾಗುತ್ತದೆ. ಆದರೆ ಇಲ್ಲಿರುವ ರೂಢಿಯಂತೆ ಕೆಲವರು ಪಾದದರ್ಶನ ಮೊದಲು ಪಡೆಯುತ್ತಾರೆ ಅಥವಾ ಕೆಲವರು ಮುಖದರ್ಶನ ಮೊದಲು ಪಡೆಯುತ್ತಾರೆ. ಒಂದೇ ಬಾರಿ ಎರಡೂ ದರ್ಶನ ಪಡೆಯುವಂತಿಲ್ಲ.

ಮೊದಲನೆಯವ : ಯಾವ ದರ್ಶನ ಮಾಡೋದೊಳಿತು.

ಯಾರೋ ಒಬ್ಬ : ನಿಜವಾದ ಭಕ್ತ ಎರಡೂ ದರ್ಶನ ಒಂದೇ ಬಾರಿ ಮಾಡೋದಿಲ್ಲ. ಪಾದದರ್ಶನ ಮಾಡಬೇಕೆ ? ಮುಖದರ್ಶನ ಮಾಡ್‌ಬೇಕೆ ಅಂತ ಗೊಂದಲದಲ್ಲಿ ಬೀಳ್ತಾನೆ. ಹೌದು...ಅಲ್ಲ ಅಂತ ಮೀನಾಮೇಷ ಎಣಿಸೋದರಲ್ಲೇ ಸಂಜೆಯಾಗಿ ಬಿಡುತ್ತೆ. ಕೊನೆಗೆ ಯಾವ ದರ್ಶನಾನೂ ಮಾಡ್ದೆ ವಾಪಸ್ ಬರೋದೂ ಉಂಟು.

ಮೊದಲನೆಯವ : ನನ್ನದೂ ಅದೇ ಗತಿಯಾಗಿದೆ.

ಯಾರೋ ಒಬ್ಬ : ನೀವು ನಿಜವಾದ ಭಕ್ತರ ದರ್ಜೆಗಿಳಿದಿದ್ದೀರಿ. ಇನ್ನೊಂದು ಮಾತು ನಿಮಗೆ ಗೊತ್ತುಂಟೆ ?

ಮೊದಲನೆಯವ : ಏನು ?

ಯಾರೋ ಒಬ್ಬ : ಈ ಜಾತ್ರೆ ಕೇವಲ ಒಂದೇ ದಿನದ್ದು. ಸೂರ್ಯಾಸ್ತವಾಗೋದ್ರಲ್ಲಿ ಈ ಜಾಗ ಖಾಲಿ ಮಾಡ್‌ಬೇಕು. ಇಲ್ಲದಿದ್ರೆ...

ಮೊದಲನೆಯವ : ಎಲ್ರೂ ಇದ್ದ ಸ್ಥಿತಿಯಲ್ಲಿ ಇದ್ದ ಹಾಗೆ ಇದ್ದು ಬಿಡ್ತಾರೆ.

ಯಾರೋ ಒಬ್ಬ : ಇಲ್ಲ. ಕೊಂಚ ವ್ಯತ್ಯಾಸವುಂಟು. ಎಲ್ರೂ ಉಳಿದು ಬಿಟ್ರೆ ಇಲ್ಲೇ

ಗಟ್ಟಿಯಾಗ್ತಾರೆ. ಮುಂದೆ ಪಾಷಾಣ ಮೂರ್ತಿಗಳಾಗ್ತಾರೆ. ಒಬ್ಬನೇ ಇದ್ರೆ ಏನೂ ಆಗಲ್ಲ.

ಮೊದಲನೆಯವ : ಮತ್ತೆ ?

ಯಾರೋ ಒಬ್ಬ : ಹುಚ್ಚನಾಗ್ತಾನೆ. ನನ್ನ ಹಾಗೆ (ನಗುತ್ತಾನೆ)

ಮೊದಲನೆಯವ : ಎಲ್ಲವೂ ವಿಚಿತ್ರ.

ಯಾರೋ ಒಬ್ಬ : ಶ್ರೀ ವಿಚಿತ್ರನ ಕೃಪೆ.

ಮೊದಲನೆಯವ : ನೀನು ಯಾರು ?

ಯಾರೋ ಒಬ್ಬ : ಯಾರೋ ಒಬ್ಬ.

(ಜನರ ಗದ್ದಲ)

: ಪಲ್ಲಕ್ಕಿ ಬಂತು.

: ದೇವರ ಪಲ್ಲಕ್ಕಿ ಬಂತು.

(ಬೆಟ್ಟದ ಮೇಲಿಂದ ದೇವರ ಪಲ್ಲಕ್ಕಿ ಅಲಂಕೃತಗೊಂಡು ವಿಜ್ರಂಭಣೆಯಿಂದ ಬರುತ್ತದೆ. ಜೈ ಶ್ರೀ ವಿಚಿತ್ರಾ ಉದಯೋಸ್ತು' ಹೀಗೆ ಘೋಷಣೆ ಕೂಗುತ್ತಾರೆ. ಪಲ್ಲಕ್ಕಿಗೆ ಹೆಗಲು ಕೊಟ್ಟ ನಾಲ್ವರು ಹಿಂಗಾಲಿನಲ್ಲಿ ನಡೆಯುತ್ತಿದ್ದಾರೆ. ಕುತ್ತಿಗೆಯ ಒಂದು ಕಡೆ ಬಗ್ಗಿಸಿಕೊಂಡು ನಡೆಯುತ್ತಾರೆ. ಪಲ್ಲಕ್ಕಿ ಬೆಟ್ಟವೇರಿ ಸೇರಿದ ಮೇಲೆ ದೇವರ ಆರತಿಯ ಹಾಡು ಕೇಳಿ ಬರುತ್ತದೆ. ಹೆಗಲು ಕೊಟ್ಟವರು ಪಲ್ಲಕ್ಕಿ ಕೆಳಗಿಡುತ್ತಾರೆ. ಭಟ್ಟರು ದೇವರನ್ನು ಕೆಳಗಿಳಿಸಿ ದೇವರ ಸ್ನಾನದ ಶಾಸ್ತ್ರ ಮಾಡುತ್ತಾರೆ. ಆ ಜನ ಸಂದಣಿಯಲ್ಲಿ ದೇವರ ಪೂಜಾ ವಿಧಾನಗಳು ನಡೆದಿರುವುದು ಸ್ಪಷ್ಟವಾಗಿ ಕಾಣುತ್ತದೆ. ಆದರೆ ಪ್ರೇಕ್ಷಕರಿಗೆ ಸರಿಯಾಗಿ ಕಾಣುವುದಿಲ್ಲ. ಅಷ್ಟರಲ್ಲಿ ಯಾರೋ ಜನ ಸಂದಣಿಯಿಂದ ಮುಂದೆ ಬರುತ್ತಾನೆ. ಭಕ್ತರ ಕೈಯಲ್ಲಿದ್ದ ತಾಳ ತೆಗೆದುಕೊಳ್ಳುತ್ತಾನೆ. ಅವನೂ ಅಷ್ಟೇ ಸಲೀಸಾಗಿ ಕೊಡುತ್ತಾನೆ. ಯಾರೋ ಒಬ್ಬನು ತಾಳಗಳನ್ನು ಹಿಡಿದುಕೊಂಡು ದೇವರ ಹಾಡು ಹಾಡತೊಡಗುತ್ತಾನೆ. ಎಲ್ಲರೂ ಕೋರಸ್‌ನಲ್ಲಿ ಹಾಡುಹಾಡುತ್ತಾರೆ.)

**ದೇವಾ ಶ್ರೀ ಚಿತ್ರ ವಿಚಿತ್ರಾ**
**ಮಹಾಭೂತಗಳ ಪುತ್ರಾ**
**ಒಪ್ಪಿಸಿಕೋ ಸೇವೆ ಧನಿ**
**ಒಂದು ದಿನದ ಜಾತ್ರೆ**
**ದೇವಾ ಒಂದು ದಿನದ ಜಾತ್ರೆ**

ವರ್ಷಕ್ಕೊಮ್ಮೆ ಸ್ನಾನ ಮಾಡುತೀ
ಸ್ವಚ್ಛವಾಗುವುದು ಹೇಗೆ ದೇವರೇ
ನಿತ್ಯಸ್ನಾನ ಮಾಡುವವರೂ ಇಲ್ಲಿ
ಹೊಲಸು ಹೊಲಸಾಗಿರುತಾರೆ
ಹೊಲಸು ಹೊಲಸಾಗಿರುತಾರೆ.

ಕೊರಳು ನಿನ್ನದು ಹಿಂದಕೆ ಹೊರಳಿದೆ
ಜನಕೆ ಬೆನ್ನುಮಾಡಿ ನಿಂತುಕೊಂಡಿದೆ
ಮುಂದೆ ನೋಡುವ ಎದೆಗಾರಿಕೆಯಿಲ್ಲ
ಅದಕೆ ಈ ಉಪಾಯ ಹುಡುಕಿದೆ
ಅದಕೀ ಉಪಾಯ ಹುಡುಕಿದೆ.

ಶರಧಿಗೆ ಏರಿಳಿವುಗಳುಂಟು
ಮಾನವರು ಇದು ಮೀರಲುಂಟೆ ?
ಜನಜೀವನ ವ್ಯಾಪಿಸಿದ ನಿನಗೆ
ದೇವರೆಂಬ ಹೆಸರು ಕೊನೆಗೆ

ಕಾಲ ಯಾರಿಗೂ ಕಾಯದು
ಮುಂದೆ ಸಾಗುವುದು ನಿಲ್ಲದು
ನಿನ್ನ ತಿರುಗು ಮುರುಗು ಜಾತ್ರೆ
ಹೇಗೆ ದಕ್ಕೀತು ಜಯದ ಪಾತ್ರೆ
ಹೇಗೆ ದಕ್ಕೀತು ಜಯದ ಪಾತ್ರೆ

(ಆರತಿಯ ಹಾಡುತ್ತಿದ್ದಂತೆ ದೇವರ ವಿಡಂಬನೆ ಇವನಾವನೊ ಮಾಡುತ್ತಿದ್ದಾನೆಂದು ಜನಕ್ಕೆ ಗೊತ್ತಾಗಿ ಬಿಡುತ್ತದೆ. ಜನ ಅವನ ಕಡೆಗೊಮ್ಮೆ ನೋಡಿ ನಿಷೇಧ ವ್ಯಕ್ತ ಪಡಿಸುತ್ತಾರೆ. ಆದರೆ ಆರತಿ ನಡೆಯುತ್ತಲೇ ಇರುತ್ತದೆ. ಕೊನೆಗೆ ಆರತಿ ಮುಗಿಯುತ್ತದೆ. ಒಬ್ಬನು ಯಾರೋ ಒಬ್ಬನ ಕೈಯಲ್ಲಿದ್ದ ತಾಳ ಕಿತ್ತುಕೊಳ್ಳುತ್ತಾನೆ. ಅಷ್ಟರಲ್ಲಿ ದೇವರ ಸ್ನಾನವಿಧಿ ಪೂರ್ಣಗೊಳ್ಳುತ್ತದೆ. "ಜಯ್ ! ಶ್ರೀ ವಿಚಿತ್ರಾ ಉದಯೋಸ್ತು" ಎನ್ನುವ ಸಾಮೂಹಿಕ ಘೋಷಣೆಯೊಂದಿಗೆ ಪಲ್ಲಕ್ಕಿ ಮುಂದೆ ಹೋಗಲು ಅನುವು ಮಾಡಿಕೊಡಲಾಗುತ್ತದೆ. ಪಲ್ಲಕ್ಕಿ ಮೊದಲಿನಂತೆಯೇ ಹಿಮ್ಮೊಗವಾಗಿ ಚಲಿಸುತ್ತದೆ. ಒಬ್ಬನು ಓಡುತ್ತ ಹೋಗಿ ಪಲ್ಲಕ್ಕಿಗೆ ಹೆಗಲು ಕೊಡುತ್ತಾನೆ.

ಈತ ಮಾತ್ರ ಆ ನಾಲ್ವರಂತೆ ನಡೆಯುವುದಿಲ್ಲ. ಇವನದು ಸರಳ ಕತ್ತು, ಸಹಜ ನಡಿಗೆ. ಎಲ್ಲರೂ ಹಿಮ್ಮೊಗವಾಗಿ ನಡೆಯುತ್ತಿದ್ದರೆ ಇವನೊಬ್ಬನೇ ಸಹಜವಾಗಿ ನಡೆಯುತ್ತಾನೆ. ಪಲ್ಲಕ್ಕಿ ಬೆಟ್ಟದತ್ತ ಹೋಗುವ ಬದಲು ಕೆಳಗೆ ಹೋಗತೊಡಗುತ್ತದೆ. ಜನ 'ಯಾರೋ ಒಬ್ಬ'ನ ಸುತ್ತಲೂ ನೆರೆಯುತ್ತಾರೆ. 'ಯಾರೋ ಒಬ್ಬ' ಪಲ್ಲಕ್ಕಿಯ ದಂಟನ್ನು ಹಿಡಿದು ಗಟ್ಟಿಯಾಗಿ ನಿಲ್ಲಿಸುತ್ತಾನೆ.)

: ಏನಾಗಿದೆ ನಿಮಗೆ ?

: ನೀವು ಪಲ್ಲಕ್ಕಿ ತಿರುವು ಮುರುವಾಗಿ ಒಯ್ತಿದ್ದೀರಲ್ಲ ?

ಯಾರೋ ಒಬ್ಬ : ಇಲ್ಲ ನಾವು ಸರಿಯಾಗಿಯೇ ಇದ್ದೇವೆ.

: ಯಾರು ಹೇಳಿದ್ರು ನೀವು ಸರಿಯಾಗಿದ್ದೀರಂತ. ನೀವು ಉಲ್ಟಾಪಲ್ಟಾ ನಿಂತಿದ್ರಿ.

: ನೀವು ಸರಿಯಾಗಿಲ್ಲ.

: ನೀವು ತಿರುವು ಮುರುವಾಗಿ ನಿಂತಿದ್ರಿ.

ಯಾರೋ ಒಬ್ಬ : ನಾನೇ ಹೇಳ್ತಿದ್ದೀನಲ್ಲ. ನಾನು ಸರಿಯಾಗಿ ಇದ್ದೀನಿ ಅಂತ ನೀವೇ ತಿರುವು ಮುರುವಾಗಿದ್ದೀರಿ.

: ನೀವೊಬ್ರೆ ಹೇಳಿದ್ರಾಯಿತೆ ? ನಾವೆಲ್ಲ ಹೇಳೋದು ಸುಳ್ಳೆ ? ನೀವ್ ಹೇಳೋದು ಮಾತ್ರ ಸರೀನೇ ?

ಯಾರೋ ಒಬ್ಬ : ಸರಿ ಇರೋದು ಸರೀನೇ. ಸುಳ್ಳು ಸತ್ಯವಾಗಲು ಸಾಧ್ಯವಿಲ್ಲ.

: ಸರಿ ಇಲ್ಲಿಂದ.

ಯಾರೋ ಒಬ್ಬ : ಇಲ್ಲ. ನಾನು ಪಲ್ಲಕ್ಕಿ ಬಿಡೋದಿಲ್ಲ.

: ನೀವು ಜಾತ್ರೆಯಲ್ಲಿ ವಿಘ್ನ ಉಂಟು ಮಾಡಲು ಬಂದಿದ್ರಾ ?

: (ಸೂಕ್ಷ್ಮವಾಗಿ ನೋಡಿ) ಆಗ ದೇವರ ಆರತಿ ನಡೀತಿದ್ದಾಗ ನೀವೇ ಅಲ್ವೆ ದೇವರ ಗೇಲಿ ಮಾಡಿ ಹಾಡ್ತಾ ಇದ್ದದ್ದು. ದೇವರ ವಿಡಂಬನೆ ಮಾಡ್ತೀರಾ ?

ಯಾರೋ ಒಬ್ಬ : ಮಾಡಬಾರದೆ ?

: ಈ ಹೊತ್ತು ದೇವರ ಗೇಲಿ ಮಾಡೊ ಮನುಷ್ಯ ನಾಳೆ ನಮ್ಮ ನಿಮ್ಮನ್ನ ಗೇಲಿ ಮಾಡ್ದೆ ಇರ್ತಾನೆಯೆ ?

: ಇವ್ನಿಗೆ ಇಲ್ಲೇ ಪಾಠ ಕಲಿಸ್‌ಬೇಕು. ಈತನ ಲಕ್ಷಣ ಯಾಕೊ ಸರಿಯಾಗಿಲ್ಲ.

: ತಲೆ ಸರಿಯಾಗಿದೆ ತಾನೆ ?

ಯಾರೋ ಒಬ್ಬ : ನೀವು ನಿಮ್ಮ ತಲೆ ಮುಟ್ಟಿ ನೋಡಿಕೊಂಡ್ರೆ ನಾನು ಸರಿಯಾಗಿದ್ದೀನೊ ಇಲ್ವೊ ಅಂತ ಗೊತ್ತಾಗತ್ತೆ.

: ಪಲ್ಲಕ್ಕಿಯ ಹೆಗಲು ಬಿಡು.

: ಶ್ರೀ ವಿಚಿತ್ರನ ಪಲ್ಲಕ್ಕಿ ಹೀಗೇ ಒಯ್ಯಬೇಕು.

ಯಾರೋ ಒಬ್ಬ : ಯಾಕೆ ?

: ಅಬ್ಬಾ ! ಯಾಕೇ ಅಂತ ಕೇಳ್ತೀರಾ ? ನಿಮ್ಗೆ ಧರ್ಮ ತುಂಬ ಸಲೀಸಾಗಿ ಸಿಕ್ಕಿದೆ. ಏನಾದ್ರೂ ಕೊಂಚ ವಕ್ರ ಕಂಡ್ರೆ ಸಾಕು ನಿಮ್ಮ ಪ್ರಶ್ನೆ ಇದ್ದೇ ಇರತ್ತೆ. ಇದು ಹೀಗೇ ಏಕೆ ಅಂತ ನಿಮಗೆ ಗೊತ್ತಿರಲಿಕ್ಕಿಲ್ಲ. ಬೇರೆ ಧರ್ಮದಲ್ಲಾದ್ರೆ ನಿಮಗೆ ಇಂಥ ಪ್ರಶ್ನೆ ಕೇಳೋಕ್ಕೆ ಅಧಿಕಾರವೇ ಇಲ್ಲ.

ಯಾರೋ ಒಬ್ಬ : ನನ್ನ ಪ್ರಶ್ನೆ ಜಾಣತನದ್ದು.

: ಯಾವ ಶಾಣೆತನ ನಿಮ್ಮದು. ದೇವರ ಕಾರ್ಯದ ಬಗ್ಗೆ ಪ್ರಶ್ನೆ ಕೇಳೋದೆ ?

(ಒಬ್ಬನು ಮುಂದೆ ಬಂದು)

: ಇವನು ಯಾವ ಪ್ರಶ್ನೆ ಕೇಳ್ತಿದ್ದಾನೆ ?

: ಇವನಂತಾನೆ ಪಲ್ಲಕ್ಕಿ ಹೀಗೇ ಏಕೆ-ಹಾಗೆ ಏಕಲ್ಲ ಅಂತ.

: ನಿಮಗೂ ಆ ಪ್ರಶ್ನೆಯ ಉತ್ತರ ಗೊತ್ತಿಲ್ಲ (ಯಾರೂ ಒಬ್ಬನಿಗೆ) ನಾನ್ ಹೇಳ್ತೀನಿ ಕೇಳಿ. ಈ ಪಲ್ಲಕ್ಕಿ ಹೀಗೆ ಹೀಗೇ ಸಾಗಬೇಕು. ಯಾಕೆ ಅಂತೀರಾ ? ಕಳೆದ ವರ್ಷವೂ ಇದು ಹೀಗೇ ಹೋಗಿತ್ತು. ಅದರ ಹಿಂದಿನ ವರ್ಷವೂ ಹೀಗೇ ಹೋಗಿತ್ತು. ಈ ವರ್ಷಾನೆ ಯಾಕೆ ಹಾಗೆ ಹೊಗ್‌ಬೇಕು ? ನಡೀರಿ...ತಗೊಂಡು ಹೋಗಿ ಪಲ್ಲಕ್ಕಿ...'ಜಯ್ ಶ್ರೀ ವಿಚಿತ್ರಾ ಉದಯೋಸ್ತು.'

ಭಟ್ಟರು : ಏನಾಗಿದೆ ?

: ಭಟ್ಟರೇ, ಈತ ಉತ್ತರವಿಲ್ಲದ ಪ್ರಶ್ನೆ ಕೇಳ್ತಿದಾನೆ.

ಭಟ್ಟರು : ಉತ್ತರವಿಲ್ಲದ ಪ್ರಶ್ನೆ ಕೇಳಲು ಅವ್ನಿಗೆ ಅಧಿಕಾರ, ಅನುಮತಿ ಯಾರು ಕೊಟ್ರು ?

(ಎಲ್ಲರೂ ಒಬ್ಬರಿಗೊಬ್ಬರು ಕೇಳುತ್ತಾರೆ. ಕೊನೆಗೆ ಸುಮ್ಮನಾಗುತ್ತಾರೆ)

: ಭಟ್ಟರೆ, ಉತ್ತರವಿಲ್ಲದ ಪ್ರಶ್ನೆ ಕೇಳಿದವರಿಗೆ ನಮ್ಮ ಧರ್ಮಶಾಸ್ತ್ರದಂತೆ ಯಾವ ಶಿಕ್ಷೆ ವಿಧಿಸ್ತಾರೆ ?

ಭಟ್ಟರು : ನಾನೇನು ಧರ್ಮಶಾಸ್ತ್ರ ಕಂಕುಳಲ್ಲಿಟ್ಕೊಂಡು ನದೀ ಹತ್ರ ಬಂದಿದ್ದೇನೇನ್ರಿ ? ಈ ವಿಷಯ ತುಂಬ ಸೂಕ್ಷ್ಮವಾಗಿ ಓದಿ ನೋಡ್‌ಬೇಕಾಗತ್ತೆ.

: ಮತ್ತೆ ಈತನಂತೂ ಪಲ್ಲಕ್ಕಿ ಏನ್ ಮಾಡಿದ್ರೂ ಬಿಡ್ತಿಲ್ಲ. ಮುಂದೇನ್ ಮಾಡೋದು ?

ಯಾರೋ ಒಬ್ಬ : ನನ್ನ ಪ್ರಶ್ನೆಗೆ ಸರಿಯಾದ ಉತ್ತರ ಕೊಡೋದು.

: ಮತ್ತೆ ಅದೇ ಹುಚ್ಚುತನ. ಪಲ್ಲಕ್ಕಿ ಹೀಗೇಕೆ ಹಾಗೇಕೆ ? ಸೂರ್ಯ ಪೂರ್ವದಲ್ಲೇ ಯಾಕೆ ಮೂಡ್ತಾನೆ ? ಸಮುದ್ರದ ನೀರು ಉಪ್ಪೇಕೆ? ಬೆಳಕು ಬೆಳ್ಳಗಿರುತ್ತದೇಕೆ ? ಇದಕ್ಕೆಲ್ಲ ನಿಮ್ಮ ಹತ್ರ ಉತ್ತರ ಇದೆಯೇ?

ಯಾರೋ ಒಬ್ಬ : ಹೌದು ಇದೆ. ನಾನು ನಿಮ್ಮ ಪ್ರಶ್ನೆಗಳಿಗೆ ಉತ್ತರ ಕೊಟ್ರೆ ನೀವು ನನ್ನ ಪ್ರಶ್ನೆಗಳಿಗೆ ಉತ್ತರ ಕೊಡ್ತೀರಾ ?

: ಏಯ್ ನೋಡ್ತೀರೇನು ? ಅವರು ಹೆಗಲು ಬಿಟ್ರು. ಮುಂದಕೊಯ್ಯಿರಿ ಪಲ್ಲಕ್ಕಿ.

(ಯಾರೂ ಒಬ್ಬನು ಇದ್ದಾಗಲೇ ಪಲ್ಲಕ್ಕಿಯ ದಂಟಿಗೆ ಹೆಗಲು ಕೊಟ್ಟು ನಿಲ್ಲುತ್ತಾರೆ.)

ಯಾರೋ ಒಬ್ಬ : ನನ್ಗೆ ಇಂಥ ಉತ್ತರ ಬೇಕಾಗಿಲ್ಲ.

ಭಟ್ಟರು : ನನಗೊಂದು ಉಪಾಯ ಹೊಳೆದಿದೆ.

: ಏನದು ?

ಭಟ್ಟರು : ಯಾವಾಗ ಮತಿ (ಬುದ್ಧಿ) ನಡೆಯುವುದಿಲ್ಲವೊ ಆಗ ಮತಗಳು ನಡೆಯುತ್ತವೆ. ಬುದ್ಧಿಯಿಂದಾಗದ ಕೆಲಸ ಮತಗಳಿಂದಾಗುತ್ತದೆ.

: ಹೇಗೆ ?

ಭಟ್ಟರು : ಪಲ್ಲಕ್ಕಿ ಹೀಗೇ ಸಾಗಬೇಕು ಅನ್ನೋರು ಯಾರು ?

ಯಾರೋ ಒಬ್ಬ : ನಾನು !

ಭಟ್ಟರು : ಪಲ್ಲಕ್ಕಿ ಹಾಗೇ ಹೋಗ್‌ಬೇಕೂಂತ ಹೇಳೋವ್ರು ಯಾರು ?

ಎಲ್ಲರೂ : ನಾವು.

ಭಟ್ಟರು : ಸರಿ ಮತ್ತೆ...ಮುಂದೆ ಹೋಗಿ ಬಹುಸಂಖ್ಯರ ಮಾತಿಗೆ ಬೆಲೆ ಜಾಸ್ತಿ. ತಗೊಂಡ್ಹೋಗಿ ಪಲ್ಲಕ್ಕಿ.

(ಎಲ್ಲರೂ ತಿರುವು ಮುರುವಾಗಿ ಹೆಗಲು ಕೊಡುತ್ತಾರೆ. ಪಲ್ಲಕ್ಕಿ ಮುಂದೆ ಸರಿಯುತ್ತದೆ. ಯಾರೋ ಒಬ್ಬ ಕೂಗುತ್ತಾನೆ. ರಸ್ತೆಯಲ್ಲಿ ಅಡ್ಡ ಬೀಳುತ್ತಾನೆ. ಜನ ಅವನನ್ನು ತುಳಿದು ಮುಂದಕ್ಕೆ ಹೋಗುತ್ತಾರೆ. ಯಾರೋ ಒಬ್ಬ ಎದ್ದೇಳುತ್ತಾನೆ. ಮೈ ಕೈ ನೋವಾದ ಪರಿವೆಯಿಲ್ಲ ಅವನಿಗೆ.)

ಯಾರೋ ಒಬ್ಬ : ಮತಗಳ ಬೆಂಬಲದಿಂದ ನನ್ನನ್ನು ತುಳಿದು ಮುಂದೆ ಹೋದರು. ನನ್ನ ಪ್ರಶ್ನೆಯನ್ನೇ ತುಳಿದು ಹೋದರು. ನಿಮ್ಮ ಕಾಲಡಿ ನಾನು ಬಿದ್ದು ತುಳಿಸಿಕೊಂಡೂ ಸಾಯದಿದ್ರೆ ನನ್ನ ಪ್ರಶ್ನೆಯಾದ್ರೂ ಯಾಕೆ ಸಾಯುತ್ತೆ ?

(ಮುಂದೆ ಹೋಗಿ ಜನರ ಗುಂಪಿನಲ್ಲಿ ಸೇರಿಕೊಳ್ಳುತ್ತಾನೆ. ಈಗ ಜಾತ್ರೆ

ತುಂಬಿಕೊಂಡಿದೆ. ಒಂದೆಡೆ ಒಬ್ಬ ಭಿಕ್ಷುಕ ಗೆರಟೆ ಹಿಡಿದು ಕುಳಿತು ಭಿಕ್ಷೆ ಬೇಡುತ್ತಿದ್ದಾನೆ. ರಸ್ತೆಯಲ್ಲಿ ಹೋಗಿ ಬರುವವರಿಗೆಲ್ಲ ಅಪ್ಪ, ಅಮ್ಮ, ಅಣ್ಣ ಅಜ್ಜ, ಅಕ್ಕ ಎಂದು ಕೈಮುಗಿದು ಗೋಗರೆಯುತ್ತಿದ್ದಾನೆ. ಅವನ ಕಾಲು ಊನವೆಂದು ಸೂಚಿಸಲು ಅವನ ಪಕ್ಕದಲ್ಲಿಟ್ಟುಕೊಂಡ ಕಂಕುಳ ಕೋಲು ಇಡಲಾಗಿದೆ. ಭಿಕ್ಷುಕನಿಗೆ ಕೆಲವರು ದುಡ್ಡು ಹಾಕುತ್ತಾರೆ. ಅಷ್ಟರಲ್ಲಿ ಸಮಾಜ ಸೇವಕನನ್ನು ನೋಡಿ ಗಾಬರಿಯಾಗುತ್ತಾನೆ. ಪರಿಚಯವಿಲ್ಲ ದವರಂತೆ ನಟಿಸುತ್ತಾನೆ. ಆ ಮನುಷ್ಯ ಭಿಕ್ಷುಕನನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದಾನೆ.)

ಸಮಾಜ ಸೇವಕ : ನಿನ್ನ ಹೆಸರೇನು ?

ಭಿಕ್ಷುಕ : ಅಪ್ಪಾ ನನ್ಗೇನಾದ್ರೂ ಕೊಡು ತಂದೆ.

ಸಮಾಜ ಸೇವಕ : ಮೊದ್ಲು ಹೆಸರು ಹೇಳು.

ಭಿಕ್ಷುಕ : ಹೆಸ್ರು ಹೇಳಿದ್ರೆ ಕೊಡ್ತೀರಾ ?

ಸಮಾಜ ಸೇವಕ : ಹೆಸರು ಹೇಳು.

ಭಿಕ್ಷುಕ : ಹೆಸ್ರು ಭಿಕ್ಷುಕ.

ಸಮಾಜ ಸೇವಕ : ಸುಳ್ಳು.

ಭಿಕ್ಷುಕ : ಈ ಗೆರಟೆಯ ಆಣೆ. ಭಿಕ್ಷುಕನಿಗೆ ಬೇರೇನು ಹೆಸ್ರು ಇರೋಕ್ಕೆ ಸಾಧ್ಯ?

ಸಮಾಜ ಸೇವಕ : ಎಷ್ಟು ವರ್ಷಗಳಿಂದ ಭಿಕ್ಷೆ ಬೇಡ್ತಾ ಇದ್ದೀಯ ?

ಭಿಕ್ಷುಕ : ಹುಟ್ಟಿದಾಗಿನಿಂದ್ಲೂ ಇದೇ ಕೆಲ್ಸರಿ. ನನ್ನಪ್ಪ, ಅಜ್ಜ ಎಲ್ರೂ ಮಾಡಿದ್ದು ಇದೇ ಕಸುಬೇ.

ಸಮಾಜ ಸೇವಕ : ನೀನು ಯಾವ ಕಾಲ್ನಿಂದ ಕುಂಟ ?

ಭಿಕ್ಷುಕ : ಎಡಗಾಲಿನಿಂದ.

ಸಮಾಜ ಸೇವಕ : ನಡೆದಾಡಿ ತೊರ್‌ಸು.

(ಭಿಕ್ಷುಕ ಕಂಕುಳಲ್ಲಿ ಕೋಲು ಇಟ್ಟುಕೊಂಡು ನಡೆದು ತೋರಿಸುತ್ತಾನೆ. ಇಷ್ಟು ದೂರದಲ್ಲಿ ನಿಂತು ಕೇಳುತ್ತಿದ್ದ, ನೋಡುತ್ತಿದ್ದ ಕೆಲ ಜನ ಮುಂದೆ ಬರುತ್ತಾರೆ.)

: ಏಯ್ ! ಸಮಾಜ ಸೇವಕ, ಇದೇನ್ ಮಾಡ್ತಾ ಇದ್ದೀರ ?

: ಪಾಪ, ಆ ಬಿಕ್ಷುಕನ ಬೆನ್ನು ಬಿದ್ದಿದ್ದೀರೇಕೆ ?

: ನಿಮ್ಮ ಬಟ್ಟೆ ನೋಡಿದ್ರೆ ನೀವು ಸಭ್ಯರಂತೆ ಕಾಣ್ತಿದ್ದೀರಿ. ಆದ್ರೆ ನಿಮ್ಮ ನಡವಳಿಕೆ ನೋಡಿದ್ರೆ ಹಾಗೆ ಕಾಣ್ತಾ ಇಲ್ಲ. ಪಾಪ, ಆ ಬಡ ಭಿಕ್ಷುಕನಿಗೆ ಯಾಕೆ ತೊಂದ್ರೆ ಕೊಡ್ತಾ ಇದ್ದೀರ ?

ಸಮಾಜ ಸೇವಕ : ಈತ ಭಿಕ್ಷುಕ ನಿಜ. ಆದರೆ ಬಡವನಲ್ಲ.

: ಈತ ಬಡವನಲ್ಲದಿದ್ರೆ ಮಾನ ಮರ್ಯಾದೆ ಬಿಟ್ಟು ಬೀದೀಲಿ ಕುಂತು ಭಿಕ್ಷೆ ಬೇಡ್ತಿದ್ದನೆ ?

ಭಿಕ್ಷುಕ : (ಜನರಿಗೆ) ನೀವಾದ್ರೂ ಹೇಳ್ರಿಯಪ್ಪ ಇವರಿಗೆ. ನಾಲ್ಕು ಕಾಸು ಸಂಪಾದನೆ ಹೊತ್ತಿಗೆ ಬಂದು ಕಾಡಿಸ್ತಾ ಇದ್ದಾರೆ ನೋಡ್ರಿ.

: ಈತ ಕೇವಲ ಭಿಕ್ಷುಕ ಅಲ್ಲ, ಕುಂಟ ಬೇರೆ.

.ಭಿಕ್ಷುಕ : ಎಡಗಾಲಿನಿಂದಲ್ಲ...ಬಲಗಾಲಿನಿಂದ.

ಸಮಾಜ : ಯಾರು ಕುಂಟ ? ನನಗಿಂತ ನಿಮಗೆ ಇವನ ಜಾಸ್ತಿ ಪರಿಚಯ ವಿದೆಯೆ ?

ಭಿಕ್ಷುಕ : ನಿಮ್ಗೆ ನನ್ನ ಪರಿಚಯ ಇರ್‌ಭೌದು. ಆದರೆ ನನಗೆಲ್ಲಿ ನಿಮ್ಮ ಪರಿಚಯ ಇದೆ ?

ಸಮಾಜ : ನಿನಗೆ ನನ್ನ ಪರಿಚಯ ಇಲ್ವೆ ?

ಭಿಕ್ಷುಕ : ಇಲ್ಲ. ನೀವೂ ಎಲ್ಲರಂತೆ ಒಬ್ರು. ನಾನೇನು ಒಂದೇ ಕಡೆ ಕೂತಿರ್ತೇನೆಯೆ ? ಹೆಚ್ಚಾಗಿ ಓಡಾಟದಲ್ಲೇ ಇರ್ತೇನೆ. ನಾನು ನನ್ನ ಖುದ್ ಅಪ್ಪನನ್ನೇ ಗುರ್ತಿಸೋದಿಲ್ಲ. ನಿಮ್ಮನ್ಹೆಂಗೆ ಗುರ್ತಿಸಲಿ ?

ಸಮಾಜ ಸೇವಕ : ಹಾಗಿದ್ರೆ ನಿನ್ಗೆ ನನ್ನ ಪರಿಚಯ ಮಾಡಿಕೊಡ್ಲೆ ಬೇಕಾಗುತ್ತೆ.

(ಅವನು ಭಿಕ್ಷುಕನ ಕಂಕುಳ ಕೋಲು ತೆಗೆದುಕೊಂಡು ಬದಿಗೆ ಸರಿಯುತ್ತಾನೆ. ಜನ ಅವನ ಬೆನ್ನಟ್ಟುತ್ತಾರೆ. ಭಿಕ್ಷುಕ ಕೂಗು ಹಾಕುತ್ತ ಒಂದು ಕಾಲಿನಲ್ಲಿ ಕುಂಟುತ್ತ ಆ ಮನುಷ್ಯನ ಹಿಂದೆ ಓಡುತ್ತಾನೆ. ಓಡುತ್ತ ಓಡುತ್ತ ತಾನು ಕುಂಟ ಎನ್ನುವುದನ್ನೇ ಮರೆತು ಎರಡೂ ಕಾಲುಗಳ ಮೇಲೆ ಸರಿಯಾಗಿ ನಿಂತುಕೊಳ್ಳುತ್ತಾನೆ. ಈತ ಕುಂಟನಲ್ಲ ಎಂದು ತಿಳಿದ ಜನ ಆಶ್ಚರ್ಯದಿಂದ ಅವನನ್ನೇ ನೋಡುತ್ತಿದ್ದಾರೆ. ಭಿಕ್ಷುಕ ನಾಚುತ್ತಾನೆ. ಸಮಾಜ ಸೇವಕ ಜನರನ್ನು ಉದ್ದೇಶಿಸಿ ಮಾತು ಆರಂಭಿಸುತ್ತಾನೆ)

ಮಿತ್ರರೇ, ನೀವು ಈಗ ಒಂದು ಜಾದೂ ನೋಡಿದಂತೆ ದಂಗಾಗಿ ನೋಡಿದ್ರೀ. ಈ ಜಾದೂ ಹೇಗೆ ನಡೀತು ಅಂತ ನಿಮಗೆ ಆಶ್ಚರ್ಯ ವಾಗಿರಬಹುದು. ಹೇಳ್ತೀನಿ. ಎಲ್ಲಕ್ಕೂ ಮೊದ್ಲು ನಾನು ನನ್ನ ಪರಿಚಯ ಮಾಡಿಕೊಡ್ತೀನಿ. ನಾನು 'ಭಿನಿಸ್'ದ ಸಂಚಾಲಕ. 'ಭಿನಿಸ್' ಅಂದ್ರೆ ಭಿಕ್ಷುಕ ನಿರ್ಮೂಲನ ಸಮಿತಿ. ನಾವು ನಮ್ಮ ಸಮಿತಿಯಿಂದ ಭಿಕ್ಷುಕರ ಸಮಸ್ಯೆಗಳ ನಿವಾರಣೆಗಾಗಿ ಹೋರಾಡ್ತಿದ್ದೀವಿ. ನಾವು ಭಿಕ್ಷುಕರನ್ನು ಹಿಡಿದು ದುಡ್ಡು ಕಾಸು ಸಾಲ ಕೊಟ್ಟು, ಕೊಡಿಸಿ ಉದ್ಯೋಗ, ವೃತ್ತಿಯಲ್ಲಿ ತೊಡಗಿಸ್ತಾ ಇದ್ದೀವಿ. ಕೆಲವರಿಗೆ ನೌಕರೀನೂ ಕೊಡಿಸ್ತಿದ್ದೀವಿ. ಹೀಗೇ ಒಂದು ಜಾತ್ರೇಲಿ ಈ

ಭಿಕ್ಷುಕನನ್ನು ನೋಡ್ದೆ. ಆಗ ಎಡಗಾಲಿನಿಂದ ಕುಂಟಿಸಿ ತೋರಿಸ್ತಿದ್ದ. ಇವನ ಗರಟೆಯಲ್ಲಿದ್ದ ಕಾಸು ತೆಗೆದುಕೊಂಡು ನಾವು ಇವನನ್ನು ನಮ್ಮ ಸಂಸ್ಥೆಯ ಸದಸ್ಯನನ್ನಾಗಿ ಮಾಡಿದ್ವಿ. ಇವನಿಗೆ ಸಾಲ ಕೊಡಿಸಿದ್ವಿ-ಸ್ವಂತ ಉದ್ಯೋಗ ಮಾಡಲು. ಮತ್ತೆ ಈಗ ನೋಡಿ.

ಭಿಕ್ಷುಕ : ನಿಮ್ಮ ಸಂಸ್ಥೆಯ ಸಾಲದ ಬಡ್ಡಿ ತೀರಿಸಲು ನನಗೆ ಈ ದಂಧೆ ಮಾಡಬೇಕಾಗಿದೆ.

ಸಮಾಜ ಸೇವಕ : ಬಡ್ಡಿ ತೀರಿಸೋದಾದ್ರೆ - ನಾವು ನಿನ್ನನ್ನು ಯಾವ ಕೆಸರಿನಿಂದ ಮೇಲೆತ್ತಿ ಮನುಷ್ಯನನ್ನಾಗಿ ಹೊರಟಿದ್ದೇವೊ, ಅದೇ ಕೆಸರಿನಲ್ಲಿ ಮತ್ತೆ ನೀನು ಕಾಲಿಡೋದೆ?

ಭಿಕ್ಷುಕ : ನಿಮಗೇನು ಗೊತ್ತು, ಇದೇ ಕೆಸರಿನಲ್ಲಿಯೇ ನಮ್ಮ ಕಮಲಗಳು ಅರಳುತ್ತವೆ.

ಸಮಾಜ ಸೇವಕ : ಈಗ ನೀವೇ ಹೇಳಿ ಮಿತ್ರರೇ ತಪ್ಪು ಯಾರದ್ದು ? ನಾವು ಸಮಾಜದಲ್ಲಿ ಬೇಡುವ ವೃತ್ತಿ ನಿರ್ಮೂಲನಕ್ಕೆ ಹೊರಟಿದ್ದೀವಿ. ಆದರೆ ಭಿಕ್ಷುಕರೇ ನಮಗೆ ಸಹಕಾರ ನೀಡುತ್ತಿಲ್ಲ. ಹೀಗಾದ್ರೆ ಹೇಗೆ ನಡೆಯಬೇಕು-ನಮ್ಮ ಭಿಕ್ಷುಕರ ನಿರ್ಮೂಲನ ಸಮಿತಿಯ ಕಾರ್ಯ? ಕ್ರಿಮಿ ಕೀಟಗಳೂ ತಮ್ಮ ಆಹಾರ ದುಡಿದು ತಿನ್ನುತ್ತವೆ. ಆದರೆ ದುಡಿಯಲು ಕೈಕಾಲು, ಗಟ್ಟಿಯಿರುವ ಈ ಜನ ಮೈ ಬಗ್ಗಿಸದೆ, ತಲೆ ತಗ್ಗಿಸಿ ಜನರ ಮುಂದೆ ದೈನ್ಯದಿಂದ ಕೈಯೊಡ್ಡಿ ಬದುಕುತ್ತಾರೆ. ಇಂಥ ಗೆರಟೆಗಳಿಂದ ದೇಶ ಹೇಗೆ ಮುಂದುವರಿಯಲು ಸಾಧ್ಯ ? ಆದರೂ ಮಿತ್ರರೇ, ನಾವು ನಿರಾಶರಾಗಿಲ್ಲ. ಸಮಾಜ ಸೇವೆ ಒಂದು ವ್ರತ ಎಂದು ಭಾವಿಸಿ ನಾವು ಪ್ರಾಮಾಣಿಕತೆಯಿಂದ ದುಡೀತಿದ್ದೇವೆ. ಅಡ್ಡಿ ಆತಂಕಗಳು ಬರ್ತವೆ. ಅವನ್ನು ನಾವು ಬದಿಗೊತ್ತಿ ಮುಂದುವರಿಯಬೇಕಾಗಿದೆ. ಈ ಭಿಕ್ಷುಕರ ಭಿಕಾರಿತನ ನಷ್ಟ ಮಾಡೋಕ್ಕೆ ನಾವು ಇನ್ನಷ್ಟು ಶಕ್ತಿ ಹಾಕಿ ಕೆಲಸ ಮಾಡಬೇಕಾದ ಅಗತ್ಯವಿದೆ. ನಮ್ಮ ಕೆಲಸ ನಿಮ್ಮ ಔದಾರ್ಯವನ್ನು ಅವಲಂಬಿಸಿದೆ. ನಮಗೆ ಈ ಕೆಲಸಕ್ಕೆ ದುಡ್ಡಿನ ಅಗತ್ಯವಿದೆ. ಸಂಸ್ಥೆಗೆ ಸ್ವತಂತ್ರ ಕಟ್ಟಡ ಬೇಕು. ಓಡಾಡಲು ನಮಗೆ ಹಣಕಾಸಿನ ಸೌಲಭ್ಯ ಬೇಕು. ಅದಕ್ಕೆ ಎಷ್ಟು ದುಡ್ಡಿದ್ದರೂ ಸಾಲದು. ಆದ್ದರಿಂದ ಮಹಾಜನಗಳೇ ನಿಮ್ಮಲ್ಲಿ ನಮ್ರತೆಯಿಂದ ಕೇಳಿಕೊಳ್ತೀನಿ. ನಮ್ಮ ಭಿಕ್ಷುಕರ ನಿರ್ಮೂಲನ ಸಂಸ್ಥೆಗೆ ಉದಾರ ಹಸ್ತದಿಂದ ಧನ ಸಹಾಯ ಮಾಡಿ.

(ಸಮಾಜ ಸೇವಕ ತನ್ನ ಬಗಲ ಚೀಲದ ಬಾಯಿ ತೆರೆದು ಎಲ್ಲರ ಬಳಿಯೂ ಹೋಗುತ್ತಾನೆ. ಕೆಲವರು ಚೀಲದಲ್ಲಿ ಹಣ ಹಾಕುತ್ತಾರೆ. ಅಷ್ಟರಲ್ಲಿ ಆ ಜನಸಂದಣಿಯಲ್ಲಿ ನುಸುಳಿಕೊಂಡು ಯಾರೂ ಒಬ್ಬ ಬರುತ್ತಾನೆ. ಸಮಾಜ ಸೇವಕ ತನ್ನ ಬಗಲಚೀಲ ಹಿಡಿದು ಅವನ ಬಳಿ ಹೋದ ಕೂಡಲೇ ಆ ಚೀಲದಲ್ಲಿ ಮುಖ ಹಾಕಿ ಗಹಗಹಿಸಿ ನಗುತ್ತಾನೆ.)

: ಏಯ್, ನೀನು ಅವನ ಜೋಳಿಗೆಯಲ್ಲಿ...

: ಜೋಳಿಗೆಯಲ್ಲ ಚೀಲ.

: ಗೆರಟೆ, ಚೀಲ, ಜೋಳಿಗೆ ಎಲ್ಲಾ ಒಂದೇ. ನೀನು ಅವನ ಚೀಲದಲ್ಲಿ ಒಂದು ಪೈಸೇನೂ ಹಾಕೋದಿಲ್ಲ. ಮತ್ತೆ, ಅವನ್ನ ಗೇಲಿ ಮಾಡ್ತೀಯ ?

ಸಮಾಜ ಸೇವಕ : ಮಗು, ಸಮಾಜ ಸೇವೆಗೆ ತಮಾಷೆ ಮಾಡ್ತೀಯಾ ?

ಯಾರೋ ಒಬ್ಬ : ನನ್ನ ಹತ್ರ ನಿನ್ನ ಚೀಲದಲ್ಲಿ ಹಾಕೋಕ್ಕೆ ಏನೂ ಇಲ್ಲ. ಅದರ ಬದ್ಲು ಒಂದ್ ಜೋಕ್ ಹೇಳ್ತೀನಿ.

ಸಮಾಜ ಸೇವಕ : ನಿಮ್ಮ ಜೋಕ್ ಕೇಳೋಕ್ಕೆ ಯಾರಿಗಿಲ್ಲಿ ಪುರಸೊತ್ತಿದೆ ?

ಯಾರೋ ಒಬ್ಬ : ಯಾಕಿಲ್ಲ ? ಈಗ ನಿನ್ನ ದೀರ್ಘ ಭಾಷಣ ಎಲ್ರೂ ಕೇಳಿಲ್ಲವೆ ?

: ಹೇಳಲಿ ಬಿಡಿ.

: ಹೇಳಿ ನೀವು ಜೋಕ್.

(ಸಮಾಜ ಸೇವಕನಿಗೆ ಕೇಳುವ ಇಷ್ಟವಿಲ್ಲದಿದ್ದರೂ ಬಲವಂತವಾಗಿ ಕೇಳುತ್ತಿದ್ದಾನೆ)

ಯಾರೋ ಒಬ್ಬ : ಒಬ್ಬನಿದ್ದ ನಾನು. ನಾನು ಅಂದ್ರೆ ಯಾರೋ ಒಬ್ಬ. ಒಂದ್ ಬಾರಿ ಹೆಂಡ ಕುಡಿಯೋದಕ್ಕೆ ಬಾರ್‌ಗೆ ಹೋದ. ಒಂದು ಬೀರ್ ಕುಡಿದು ಹೊರಗೆ ಬಂದ. ಉಚ್ಚೆ ಹೊಯ್ದ. ಎರಡನೆಯ ಬೀರ್ ಕುಡಿದ. ಹೊರಗೆ ಬಂದ. ಉಚ್ಚೆ ಹೊಯ್ದ. ಮೂರನೆ ಬೀರ್ ಕುಡಿದ. ಹೊರಗೆ ಬಂದ. ಉಚ್ಚೆ ಹೊಯ್ದ. ನಾಲ್ಕನೆಯ ಬೀರ್ ಕುಡಿದ ಹೊರಗೆ ಬಂದ ಉಚ್ಚೆ ಹೊಯ್ದ. ಐದನೆಯ ಬಾಟ್ಲಿಯ ಮುಚ್ಚಳ ತೆಗೆದ. ಹೊರಗೆ ಬಂದ...ನೀರು ಚೆಲ್ಲಿದಂತೆ ಚೆಲ್ಲುತ್ತ ಮುದ್ದಾಗಿ ಹೇಳ್ದ ಹೀಗೆ ಅಡ್ಡದಾರೀಲಿ ಏಕೆ ಬೀಳ್ತಿ ? ಹೀಗೆ ನೇರವಾಗಿ ಬೀಳು.

(ಎಲ್ಲರೂ ನಗುತ್ತಾರೆ. ಸಮಾಜಸೇವಕ ಮೌನ)

ಯಾರೋ ಒಬ್ಬ : ನೀವು ನಗಲೇ ಇಲ್ಲ.

ಸಮಾಜ ಸೇವಕ : ನನಗೆ ನಿಮ್ಮ ಜೋಕ್ ಅರ್ಥವಾಗಲಿಲ್ಲ.

ಯಾರೋ ಒಬ್ಬ : ಮೊದ್ಲೆ ಹೇಳಿದ್ನಲ್ಲ ಇದೊಂದು ಜೋಕ್ ಅಂತ. ಮುಗಿದ ಮೇಲೆ ನಗ್‌ಬೇಕಿತ್ತು. ಮಿಕ್ಕವ್ರು ನಗಲಿಲ್ವೆ ?

ಸಮಾಜ ಸೇವಕ : ನನಗೆ ಜೋಕ್ ಏನೂಂತ ತಿಳೀದಿದ್ರೆ ನಗೋದು ಹ್ಯಾಗೆ ?

ಯಾರೋ ಒಬ್ಬ : ಜೋಕ್ ತಿಳೀದಿದ್ರೆ ಹೋಗ್ಲಿ. ಜೋಕಿನ ಅರ್ಥವಾದ್ರೂ ತಿಳೀತಾ ?

ಸಮಾಜ ಸೇವಕ : ಜೋಕ್ ಅರ್ಥವಾಗಲಿಲ್ಲ ಅಂತ ಹೇಳಿದ್ನಲ್ಲ.

(ಭಿಕ್ಷುಕ ಬರುತ್ತಾನೆ)

ಭಿಕ್ಷುಕ : ನಿಮ್ಮ ಜೋಕು ಮತ್ತು ಅದರ ಮರ್ಮ ನನ್ಗೆ ಸರಿಯಾಗಿ ಅರ್ಥವಾಗಿದೆ. (ಸಮಾಜ ಸೇವಕನಿಗೆ) ನೀವ್ ಮಧ್ಯೆ ಬರೋದು ಬೇಡ. ನನ್ನ ಭಿಕ್ಷೆ. ನಾನ್ ಬೇಡ್ತೀನಿ. ನಿಮ್ಮ ಅಡ್ಡದಾರಿ ಬೇಡ.

(ಭಿಕ್ಷುಕ ಸಮಾಜ ಸೇವಕನನ್ನು ಬದಿಗೆ ಸರಿಸಿ ಗೆರಟೆ ಹಿಡಿದುಕೊಂಡು ಭಿಕ್ಷೆ ಕೇಳುವ ಕಾಯಕ ತೊಡಗುತ್ತಾನೆ. ಸಮಾಜ ಸೇವಕ ನಿದಾನವಾಗಿ ಕಣ್ಮರೆಯಾಗುತ್ತಾನೆ. ಜನ ಸಮಾಜ ಸೇವಕ, ಭಿಕ್ಷುಕನನ್ನು ನೋಡಿ ನಗುತ್ತಾರೆ)

ಯಾರೋ ಒಬ್ಬ : ಈಗ ನಾನು ನಿನಗೊಂದು 'ಭಿಕ್ಷೆ' ಹಾಕ್ತೀನಿ.

ಭಿಕ್ಷುಕ : ನೀವು ಮಾತಾಡೋದು ನೋಡಿದ್ರೆ ನೀವು ಭಿಕ್ಷೆ ಹಾಕುವವರಂತೆ ತೋರುವುದಿಲ್ಲ.

ಯಾರೋ ಒಬ್ಬ : ಹಾಗೇನು...ನೋಡ್ತಿಯಾ ? ಅಂಗೈ ಹುಣ್ಣಿಗೆ ಕನ್ನಡಿ ಏಕೆ ? ಕೆಳಗೆ ಇಡು ನಿನ್ನ ಗೆರಟೆ.

ಭಿಕ್ಷುಕ : ಗೆರಟೆ ಯಾಕೆ ಕೆಳಗಿಡಲಿ. ಭಿಕ್ಷೆ ಮೇಲಿಂದ್ಲೆ ಹಾಕಿ.

ಯಾರೋ ಒಬ್ಬ : ನಿನ್ಗೆ ನಿನ್ನ ಪೂರ್ವಜರ ಕಥೆ ಗೊತ್ತಿಲ್ವೆ ?

ಭಿಕ್ಷುಕ : ಏನ್ ಕಥೆ, ಯಾರು ಪೂರ್ವಜರು.

ಯಾರೋ ಒಬ್ಬ : ಒಬ್ಬ ಭಿಕ್ಷುಕ ಇದ್ದ. ಅವನಿಗೆ ಒಂದು ದಿನ ದೇವರು ಪ್ರತ್ಯಕ್ಷನಾದ. ಜೋಳಿಗೆ ಮುಂದೆ ಮಾಡು ಅಂತ ಹೇಳ್ದ. 'ನಾನು ನಿನ್ನ ಜೋಳಿಗೆಯಲ್ಲಿ ಬಂಗಾರ ಸುರೀತೇನೆ. ಆದರೆ ಒಂದು ಜೋಳಿಗೆಯಲ್ಲಿ ಹಿಡಿಸುವುದಷ್ಟೇ ತೆಗೆದುಕೊ. ಜೋಳಿಗೆ ಹರಿದು ಕೆಳಗೆ ಬಿದ್ದರೆ ಎಲ್ಲಾ ಮಣ್ಣಾಗಿ ಹೋಗುತ್ತೆ' ಅಂದ. ದೇವರು ಜೋಳಿಗೆಯಲ್ಲಿ ಚಿನ್ನ ಸುರಿತಾ ನಿಂತ್ಕೊಂಡ. ಭಿಕ್ಷುಕನ ಆಶೆ ಬೆಳೀತಾನೇ ಇತ್ತು. ಭಿಕ್ಷುಕನ ಜೋಳಿಗೆ ಹಳೆಯದಾಗಿತ್ತು. ಹರಿದು ಬೀಳುವ ಸ್ಥಿತಿಯಲ್ಲಿತ್ತು. ಹೊಸದಾಗಿ, ಅಂದವಾಗಿ ಇರಲು ಅದೇನು ಶ್ರೀಮಂತರ ಜೋಳಿಗೆ ಆಗಿರಲಿಲ್ಲ. ಕೊನೆಗೆ ಏನಾಗಬೇಕಿತ್ತೊ ಅದೇ ಆಯ್ತು.

ಭಿಕ್ಷುಕ : ಜೋಳಿಗೆ ಹರೀತು. ಚಿನ್ನ ಮಣ್ಣಿನಲ್ಲಿ ಸೇರ್ಕೊಂಡು ಮಣ್ಣಾಯ್ತು. ದೇವರು ಮಾಯವಾಗಿ ಬಿಟ್ಟ.

ಯಾರೋ ಒಬ್ಬ : ನಿನ್ನ ಗೆರಟೆಗೆ ತೂತು ಬೀಳ್‌ಬಾರ್ದೂಂತ ಹೇಳ್ತಿದ್ದೀನಿ. ಗೆರಟೆ ಕೆಳಗಿಡು.

ಭಿಕ್ಷುಕ : (ಗೆರಟೆ ಕೆಳಗಿಡುತ್ತಾನೆ) ಈಗ ಹಾಕು, ನಿಮ್ಮ ವಜ್ರ, ಮಾಣಿಕ್ಯ.
(ಯಾರೋ ಒಬ್ಬ ಜಿಗಿದು ಗೆರಟೆಯಲ್ಲಿ ಕಾಲು ಹಾಕುತ್ತಾನೆ)

ಭಿಕ್ಷುಕ : ಇದೇನು ಮುತ್ಕಾಳ್ತನ.

ಯಾರೋ ಒಬ್ಬ : ಈಗ ನಾನು ಪೂರ್ತಿಯಾಗಿ ನಿಮ್ಮ ಭಿಕ್ಷೆಯಲ್ಲಿ ಬಿದ್ದಿದ್ದೇನೆ.

ಭಿಕ್ಷುಕ : ನೀವೀಗ ಪೂರ್ತಿ ಭಿಕ್ಷೆಯಲ್ಲಿ ಬಿದ್ರೆ...ನಿಮ್ಮನ್ನು ತಗೊಂಡು ನಾನೇನು ಮಾಡ್‌ಬೇಕು ?

ಯಾರೋ ಒಬ್ಬ : ಭಿಕ್ಷೆಯಲ್ಲಿ ಸಿಕ್ಕಿದ್ದನ್ನು ನೀನು ಹೇಗೆ ಉಪಯೋಗಿಸ್ತೀಯೋ ಹಾಗೆ ಮಾಡು. ನನ್ನನ್ನೊಯ್ದು ಬೇಕಿದ್ರೆ ಹೆಂಡದಂಗಡಿಯವನಿಗೆ ಕೊಡು. ಇಲ್ದಿದ್ರೆ ಮಟ್ಕಾಕ್ಕೆ ಹಚ್ಚು.

ಭಿಕ್ಷುಕ : ನೀವು ಯಾರಿಗೂ ಬೇಕಿಲ್ಲ. ದುಡ್ಡಿಗಿರೋ ಬೆಲೆ ನಿಮಗೆ ಉಂಟೆ ? ಬಿಡಿ, ನನ್ನ ಗೆರಟೆ.

ಯಾರೋ ಒಬ್ಬ : ನಾನೇಕೆ ಬಿಡ್ಲಿ. ನಾನು ನಿನ್ನ ಭಿಕ್ಷೆಗೆ ಬಿದ್ದಿದ್ದೀನಿ.

ಭಿಕ್ಷುಕ : ನೀವು ನನ್ನ ಜಾತ್ರೆ ಕೆಡಿಸಿ ಬಿಡ್ತೀರಿ. ನನ್ನ ಗೆರಟೆ ಬಿಡಿ.
(ಯಾರೋ ಒಬ್ಬ ಏನು ಹೇಳಿದರೂ ಕೇಳುವುದಿಲ್ಲ.) ನೀವೇನು ಅಂದ್ಕೊಂಡಿದ್ದೀರಿ. ನಾನು ನಿಮಗೆ ಅಂಜ್ತೀನಿ ಅಂತ್ಲಾ ? ಭಿಕ್ಷುಕ ನಾದ್ರೇನಾಯ್ತು ನಾನು ಹೇಡಿಯಲ್ಲ. (ಅವನನ್ನು ದೂಡಿ ಒಗೆಯುತ್ತಾನೆ. ತನ್ನ ಗೆರಟೆ ತೆಗೆದುಕೊಳ್ಳುತ್ತಾನೆ) ಹಾಳಾಗಿ ಹೋಗ್ಲಿ ಈ ಭಿಕ್ಷೆ. ಅದರ ಬದ್ಲು ಸಾಲ ಮಾಡಿ ಉದ್ಯೋಗ ಧಂದೆ ಮಾಡೋದು ಒಳ್ಳೇದು. (ಹೋಗಲು ಸನ್ನದ್ಧ)

ಯಾರೋ ಒಬ್ಬ : ಏಯ್ ಭಿಕ್ಷುಕ, ನಿಲ್ಲು ನಿಲ್ಲು. ನಿನ್ನ ಗೆರಟೆಯಲ್ಲಿ ಹಣ ಇದೆ ನೋಡು. ತಗೊಂಡ್ಹೋಗು. (ಭಿಕ್ಷುಕ ದುಡ್ಡು ತೆಗೆದುಕೊಳ್ಳದೆ ಹೋಗುತ್ತಾನೆ) ಮೂರು ಪೈಸೆ. ಮೂರು ಪೈಸೆಗಳ ನಾಣ್ಯ ಬಿಟ್ಟು ಹೋದ. ದುಡ್ಡು ಒಯ್ದರೇನಾಗ್ತಿತ್ತು ? ಗೆರಟೆಯನ್ನಾದ್ರೂ ಬಿಟ್ಟು ಹೋಗ್‌ಬಹುದಿತ್ತು. ಆದ್ರೆ ಈತ ಗೆರಟೆ ತಕ್ಕೊಂಡು ಹೋಗಿದ್ದಾನೆ. ಅದು ಅವನ ಆಸ್ತಿ ಹುಟ್ಟು ದರಿದ್ರ ಈತ. ಗೆರಟೆ ವೃತ್ತಿಯ ದರಿದ್ರ. ಸತ್ರೂ ತನ್ನ ಗೆರಟೆ ವೃತ್ತಿ ಬಿಡಲಿಕ್ಕಿಲ್ಲ. ಗೆರಟೆಯೇ ಅವನ ಮೂಲ

ಬಂಡವಾಳ. ಗೆರಟೆ ಅವ್ನು ಕಾದಿಡ್ತಾನೆ. ನಾನು ಈ ಮೂರು ಪೈಸೆ ಕಾದಿಡಬೇಕು. ಇದೊಂದು ಪ್ರಾರಬ್ಧ.

(ಹಣ ಜೋಪಾನವಾಗಿ ಜೇಬಿನಲ್ಲಿಟ್ಟುಕೊಳ್ಳುತ್ತಾನೆ.)

(ಒಬ್ಬ ದೊಂಬರಾಟದವನು ಬರುತ್ತಾನೆ. ಕತ್ತಿನಲ್ಲಿ ಇಳಿ ಬಿಟ್ಟ ಢೋಲು ಇದೆ. ಡೋಲು ಬಡಿಯುತ್ತ, ಕುಣಿಯುತ್ತ ಬರುತ್ತಿರುವುದನ್ನು ನೋಡಿ ಜನ ಸೇರುತ್ತಾರೆ.)

ದೊಂಬರಾಟದವ: ಬನ್ನಿ...ಬನ್ನಿ...ಎಲ್ರೂ ಬನ್ನಿ. ಕೋತಿಯ ಆಟ ನೋಡಿ. ಹುಡುಗರು, ಗಂಡು, ಹೆಣ್ಣು, ಮಕ್ಕಳು, ಮರಿಗಳು, ಆಟ ನೋಡಿ ಆಟ, ಕೋತಿಯ ಆಟ. ದುಡ್ಡು ಹಾಕಿ, ಬಡವನ ಮೇಲೆ ದಯೆ ತೋರ್ಸಿ. ಮಾವನ ಕೈ ಮೇಲ್ ಜೋಬಿನಲ್ಲಿ, ಅತ್ತೆಯ ಕೈ ಚೀಲದಲ್ಲಿ, ಅಜ್ಜನ ಕೈ ಕಿಸೆಯಲ್ಲಿ. ಹಾಕಿ ಹಾಕಿ ದುಡ್ಡು ಹಾಕಿ. ಆಟ ನೋಡಿ, ಕೋತಿಯ ಆಟ, ಕೋತಿಯ ಸರ್ಕಸ್ ನೋಡಿ.

(ಎಲ್ಲರೂ ನೆಲದ ಮೇಲೆ ಹಾಸಿದ ಬಟ್ಟೆಯ ಮೇಲೆ ದುಡ್ಡು ಒಗೆಯುತ್ತಾರೆ)

: ಅರೆ, ಎಷ್ಟೊತ್ತಿನಿಂದ ಸುಮ್ನೆ ಕೂಗ್ತಾ ಇದ್ದೀಯ ಆಟ ನೋಡಿ ಕೋತಿಯ ಆಟ ನೋಡಿ ಅಂತ. ಎಲ್ಲಿದೆ ನಿನ್ನ ಕೋತಿ ?

: ಕೋತಿ ಇಲ್ಲದೆ ಯಾವ ಆಟ ?

: ಕೋತಿ ಇಲ್ದೆ ಯಾವ ಆಟ ?

: ಕೋತಿ ಎಲ್ಲಿದೆ ತಗೊಂಡ್‌ಬಾ.

ದೊಂಬರಾಟದವ: ಕೋತಿ ತರೋಕ್ಕೆ ನಾನೇನು ಮುಚ್ಚಿಟ್ಟಿದ್ದೀನಾ ?

: ಮತ್ತೆ ? ಕೋತಿ ಎಲ್ಲಿದೆ ?

ದೊಂಬರಾಟದವ: (ಅಳುಮುಖ) ಜಾತ್ರೆ ಬಂದಾಗ ಕೋತಿ ಕಳೆದ್ಹೋಯ್ತು.

: ಕೋತಿ ಕಳೆದು ಹೋದ್ರೆ ಯಾಕೆ ಬಾರಿಸ್ತೀ ? ಯಾಕೆ ಕುಣಿತೀ ?

ದೊಂಬರಾಟದವ: ಈ ಡೊಳ್ಳಿನ ಸದ್ದು ಕೇಳಿ ಕೋತಿ ಓಡಿ ಬರ್‌ಬಹುದೂಂತ ಬಡೀತಾ ಇದೀನಿ.

: ಮತ್ತೆ ಬರ್ದೆ ಇದ್ರೆ ?

ದೊಂಬರಾಟದವ: ಹಾಗೆ ಹೇಳ್‌ಬೇಡಿ ಸಾಮೀ. ನಾನು ಕೋತಿ ಕರೀತಾ ಇದ್ದೀನಿ. ಅದಿದ್ರೆ ನನ್ನ ಹೊಟ್ಟೆ ತುಂಬುತ್ತೆ.

: ಹಾಗಿದ್ರೆ ಇನ್ನು ಜೋರಾಗಿ ಡೊಳ್ಳು ಬಾರಿಸು ನೋಡೋಣ ಬರುತ್ತದೆಯೇನೊ ?

ದೊಂಬರಾಟದವ: ಬರತ್ತೆ ನನ್ನ ಕೋತಿ. ನಾನು ಬಾರಿಸೊ ಕೆಲ್ಸ ಮಾಡ್ತೀನಿ. ನೀವು ನಿಮ್ಮ ಕೆಲಸ ಮಾಡಿ.

: ಯಾವ ಕೆಲಸ ?

ದೊಂಬರಾಟದವ: ದುಡ್ಡಿಗೆ ದುಡ್ಡು, ಕಾಸಿಗೆ ಕಾಸು. (ಡೊಳ್ಳು ಬಡಿಯುವವನು)

: ಈಗ ಯಾರೂ ದುಡ್ಡು ಹಾಕ್‌ಬೇಡಿ. ಮೊದ್ಲು ಇವನ ಕೋತಿ ಬರ್‍ಲಿ. ಆಮೇಲೆ ನೋಡೋಣ.

: ಹೂಂ.....ಬಾರಿಸು.

(ಎಲ್ಲರೂ ಅವನನ್ನು 'ಬಾರಿಸು 'ಬಾರಿಸು' ಅಂತ ಪೀಡಿಸುತ್ತಾರೆ. ಆತ ಬಾರಿಸುತ್ತಾನೆ. ಆತ ಅಂಜಿದ್ದಾನೆ. ಜನರ ಮಧ್ಯದಿಂದ ನುಸುಳಿಕೊಂಡು ಹೋಗಲು ಹೊಂಚು ಹಾಕುತ್ತಾನೆ. ಆದರೆ ಜನ ಅವನನ್ನು ಹೊರಗೆ ಹೋಗಲು ಬಿಡುವುದಿಲ್ಲ. ಅವನು ಗುಂಪಿನಿಂದ ಹೊರಗೆ ಹೋಗಲು ಪ್ರಯತ್ನಿಸಿದಷ್ಟೂ ಗುಂಪು ಅವರನ್ನು ಒಳಗೆ ತಳ್ಳುತ್ತದೆ. ಅವನು ಸುಸ್ತಾಗಿದ್ದಾನೆ. ಅಷ್ಟರಲ್ಲಿ ಅವನ ಬಾರಿಸುವಿಕೆಯಲ್ಲಿ ಹೆಜ್ಜೆ ಹಾಕಿ ಕುಣಿಯುತ್ತ ಯಾರೋ ಒಬ್ಬ ಬರುತ್ತಾನೆ. ಜನ ಕುತೂಹಲದಿಂದ, ಆಶ್ಚರ್ಯದಿಂದ ಅವನ ಕುಣಿತ ನೋಡುತ್ತಾರೆ. ಯಾರೋ ಒಬ್ಬ ಕುಣಿಯುತ್ತ ಹಾಡುತ್ತಾನೆ.)

ತುರಿ ತುರಿ ತುರಿಸುತ್ತೆ ನನ್ನ ತಲೆ
ತುರಿಸುತ್ತೆ ನನ್ನ ತಲೆ

ನಾನು ಕಳೆದು ಹೋಗಿದ್ದೀನಿ
ತುಂಬಿದ ಜಾತ್ರೆಯಲ್ಲಿ
ತಲೆಯಿಂದ ಕಾಲಿನವರೆಗ
ಮುಳುಗಿ ಹೋಗಿದ್ದೇನೆ-ಸಕ್ಕರೆಯಲ್ಲಿ
ತಲೆಯ ಮೇಲೆ ಹೂವಿನ ರಾಶಿ
ಆದರೂ ಕೋತಿ-ನಾನು

ಕಳೆದು ಹೋದ ಹಸುಳೆ
ನೀರು ತುಂಬಿದ ಕೆರೆಯ
ಬಳಿಯಿದ್ದಂತೆ ನಾನು ಇಲ್ಲಿ
ಯಾರಿಲ್ಲದ ಕಾಡಿನಲ್ಲಿ
ಸ್ವತಂತ್ರವಾಗಿ ಹಾರಾಡಿದ
ಕೋತಿ ನಾನು.

**ಕೆತ್ತಿ ಕೆತ್ತಿದ ಕುಂಡೆ ನನ್ನದು**
**ಕೆಂಪು ಕೆಂಪಾಯಿತು.**
**ಬೆಳ್ಳಗಿರುವ ಸುಂದರಿಯ**
**ಕೆನ್ನಗಳಂತಾಗಿವೆ**
**ಕಾಡಿನಲ್ಲಿ ನಾಡಿನಲ್ಲಿ ಎಲ್ಲಿದ್ದರೂ**
**ಕೋತಿ ನಾನು.**

(ಯಾರೋ ಒಬ್ಬ ಮಾಡುತ್ತಿರುವ ಕೋತಿ ಕುಣಿತ ನೋಡಿ ಜನ ಕಾಸು ಹಾಕುತ್ತಾರೆ. ಯಾರೋ ಒಬ್ಬ ತುಂಬ ಹಣ ಸಂಗ್ರಹಿಸುತ್ತಾನೆ. ಕುಣಿತ ಮುಗಿಯುತ್ತದೆ. ಜನ ಬದಿಗೆ ಸರಿಯುತ್ತಾರೆ. ದೊಂಬರಾಟದವನು ಮತ್ತು ಯಾರೂ ಒಬ್ಬ ಸೇರಿ ಅಲ್ಲಿ-ಇಲ್ಲಿ ಬಿದ್ದ ಕಾಸು ಕೂಡಿಸುತ್ತಾರೆ)

ದೊಂಬರಾಟದವ: ನೀನು ತುಂಬ ದೊಡ್ಡ ಉಪಕಾರ ಮಾಡ್ದೆ. ಇಲ್ದಿದ್ರೆ ಈ ಜನ ನನ್ಗೆ ಕಾಡಿಸಿ ಪೀಡಿಸ್ತಿದ್ರು.

ಯಾರೋ ಒಬ್ಬ: ಯಾವ ಉಪಕಾರ ?

ದೊಂಬರಾಟದವ: ನೀನು ಸರಿಯಾದ ಹೊತ್ತಿನಲ್ಲಿ ನನ್ನ ಕೋತಿಯಂತೆ ಬಂದೆ.

ಯಾರೋ ಒಬ್ಬ: ಅಂದ್ರೆ ?

ದೊಂಬರಾಟದವ: ಅಂದ್ರೆ...ನನ್ನ ಕೋತಿ ಇದ್ದಿದ್ದರೆ ಮಾಡಿ ತೋರಿಸ್ತಿದ್ದ. ಕೋತಿ ಕುಣಿತ ನೀನು ಮಾಡಿ ತೋರಿಸ್ದೆ.

ಯಾರೋ ಒಬ್ಬ: ಅದರಲ್ಲೇನು, ನಾನಾದ್ರೂ ಎಲ್ಲಿ ಮನುಷ್ಯ, ನಾನು ನಿಜಕ್ಕೂ ಕೋತಿಯೇ !

ದೊಂಬರಾಟದವ: ಏನು ತಮಾಷೆ ಮಾಡ್ತಿದ್ದೀರಾ ? ಕೊಡಿ ನನ್ನ ದುಡ್ಡು.

ಯಾರೋ ಒಬ್ಬ: ನಿನ್ನ ದುಡ್ಡೇ, ಎಲ್ಲೀ ದುಡ್ಡು, ಯಾವ ದುಡ್ಡು ?

ದೊಂಬರಾಟದವ: ಜನಗಳು ಕೋತಿಗೆ ಹಾಕಿದ್ದು.

ಯಾರೋ ಒಬ್ಬ: ಕೋತಿಗೆ ಹಾಕಿದ್ದು ಕೋತಿಗೆ (ನನಗ) ಹೋಯ್ತು.

ದೊಂಬರಾಟದವ: ನನ್ನಂಥ ಬಡವನ ಹೊಟ್ಟೆ ಮೇಲೆ ಯಾಕೆ ಹೊಡೆಯುತ್ತಿ ? ಕೊಟ್ಟು ಬಿಡು ದುಡ್ಡು. ದೇವ್ರು ನಿನ್ಗೆ ಒಳ್ಳೇದ್ ಮಾಡ್ತಾನೆ.

ಯಾರೋ ಒಬ್ಬ: ನನಗೆ ನಿನ್ನ ದುಡ್ಡು ಬೇಡ.

ದೊಂಬರಾಟದವ: (ಪುಸಲಾಯಿಸುತ್ತ) ಅದು ನಿನ್ನ ಮುಖ ನೋಡಿದ್ರೆ ಗೊತ್ತಾಗುತ್ತೆ.

ಯಾರೋ ಒಬ್ಬ: ಬೆಣ್ಣೆ ಹಚ್ಚೋದ್ ಬೇಡ.

ದೊಂಬರಾಟದವ: ಮತ್ತೇನು ಬೇಕು ?

ಯಾರೋ ಒಬ್ಬ: ನನ್ನ ಪ್ರಶ್ನೆಗಳ ಉತ್ತರ. ನಿಜವಾದ ಉತ್ತರ. ನೀನು ನನ್ನ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಟ್ರೆ ನಿನ್ನ ದುಡ್ಡನ್ನೆಲ್ಲ ಕೊಟ್ಟು ಬಿಡ್ತೀನಿ.

ಸುಳ್ಳೇನಾದ್ರೂ ಹೇಳಿದ್ರೆ ನನ್ನ ಹತ್ರ ಇರೋ ನಿನ್ನ ದುಡ್ಡು, ನಿನ್ನ ಹತ್ರ ಇರೋ ನಿನ್ನ ದುಡ್ಡು ಸಮುದ್ರಕೊಯ್ದು ಹಾಕಿ ಬಿಡ್ತೀನಿ. ನಿಜ ಹೇಳ್ತೀಯಾ ?

ದೊಂಬರಾಟದವ: ಹೌದು.

ಯಾರೋ ಒಬ್ಬ: ಹಾಗಿದ್ರೆ ನಿನ್ನ ಪ್ರೀತಿಯ ಪ್ರಾಣಿಯ ಆಣೆ ಮಾಡಿ ಹೇಳು ನಿಜ ಹೇಳ್ತೀನಿ ಅಂತ.

ದೊಂಬರಾಟದವ: ನನ್ನ ಪ್ರೀತಿಯ ಪ್ರಾಣಿಯ ಆಣೆ ಮಾಡಿ ಹೇಳ್ತೀನಿ. ಹೇಳೊದೆಲ್ಲ ನಿಜ ಹೇಳ್ತೀನಿ.

ಯಾರೋ ಒಬ್ಬ: ಯಾವ್ದು ನಿನ್ನ ಪ್ರೀತಿಯ ಪ್ರಾಣಿ ?

ದೊಂಬರಾಟದವ: ನನ್ನ ಪ್ರೀತಿಯ ಕೋತಿಯ ಆಣೆ ಮಾಡಿ ನಿಜ ಹೇಳ್ತೀನಿ.

ಯಾರೋ ಒಬ್ಬ: (ಸಿಟ್ಟಾಗಿ) ಸುಳ್ಳು...ತಾ ನಿನ್ಹತ್ರ ಇರೋ ದುಡ್ಡು.

ದೊಂಬರಾಟದವ: ಇಲ್ಲ, ನಿಜ ಹೇಳ್ತೀನಿ. ನನ್ನಾಣೆ ಸತ್ಯ ಹೇಳ್ತೀನಿ.

ಯಾರೋ ಒಬ್ಬ: ನಿನ್ನ ಕೋತಿ ಎಲ್ಲಿ ಕಳೆದು ಹೋಗಿದೆ ?

ದೊಂಬರಾಟದವ: (ಅಳುತ್ತಾನೆ) .......................

ಯಾರೋ ಒಬ್ಬ: ಅಳೋ ನಾಟಕ ಬೇಡ. ನಿಜ ಹೇಳು. ಕೋತಿ ಎಲ್ಲಿ ಕಳೆದು ಹೋಗಿದೆ?

ದೊಂಬರಾಟದವ: ಇಲ್ಲ.

ಯಾರೋ ಒಬ್ಬ: ಏನಿಲ್ಲ ?

ದೊಂಬರಾಟದವ: ನನ್ನ ಕೋತಿ ಕಳೆದು ಹೋಗಿಲ್ಲ.

ಯಾರೋ ಒಬ್ಬ: ಮತ್ತೆ ? ನೀನೇಕೆ ಜನರಿಗೆ ಮೋಸ ಮಾಡ್ತೀಯ ?

ದೊಂಬರಾಟದವ: (ಹೊಟ್ಟೆಯ ಮೇಲೆ ಕೈ ಹೊಡೆದುಕೊಳ್ಳುತ್ತಾನೆ)

ಯಾರೋ ಒಬ್ಬ: ಈಗಾದರೂ ಕೋತಿ ತಗೋತೀಯ ?

ದೊಂಬರಾಟದವ: ಇಲ್ಲಪ್ಪ...ಅದನ್ನು ಸಾಕೋದೇ ಕಷ್ಟ. ಅದಕ್ಕಿಂತ ಈ ಮೋಸದ ಧಂದೇನೇ ಒಳ್ಳೇದು. ಕೋತಿ ಕಳೆದು ಹೋಗಿದೆ ಅಂತ ಬರಿಯ ಡೊಳ್ಳು ಬಾರಿಸೋದು. ಜನ ಪಾಪ ಅಂತ ಮರಗ್ತಾರೆ. ಸಹಾನುಭೂತಿ ತೋರಿಸ್ತಾರೆ. ನಾಲ್ಕು ಕಾಸು ಉದರತ್ತೆ. ಇದೇ ಒಳ್ಳೇದು. ನನ್ನ ದುಡ್ಡು ಕೊಡಿ, ನಾನು ಹೋಗ್ತೀನಿ.

ಯಾರೋ ಒಬ್ಬ: (ಅವನಿಗೆ ಎಲ್ಲ ದುಡ್ಡು ಕೊಡುತ್ತಾನೆ) ನಿನ್ನ ಸನ್ಮಾನ ಮಾಡೋಕ್ಕೆ ನನ್ನ ಹತ್ರ ಏನೂ ಇಲ್ಲ.

ದೊಂಬರಾಟದವ: ಯಾವ ಸನ್ಮಾನ ? ಏಕೆ ?

ಯಾರೋ ಒಬ್ಬ: ಇಷ್ಟೆಲ್ಲ ಜನಕ್ಕೆ ಒಂದೇ ಬಾರಿ ಮೋಸ ಮಾಡಿ ಮೋಡಿ ಹಾಕೊ ತಾಕತ್ತು ನಿಂದು.

ದೊಂಬರಾಟದವ: (ಜಂಬದಿಂದ) ಇದೇನು ಮಹಾ. ಒಬ್ಬೊಬ್ಬರ ಕುವತ್ತು ಅದು.
(ಆಟ ನೋಡಿ ಆಟ...ಆಟ ನೋಡಿ...ಕೋತಿ ಆಟ ನೋಡಿ ಎಂದು ಹೇಳುತ್ತ ಡೊಳ್ಳು ಬಾರಿಸುತ್ತ ನಿರ್ಗಮಿಸುತ್ತಾನೆ.)

ಯಾರೋ ಒಬ್ಬ: ಎಷ್ಟು ಅದೃಷ್ಟವಂತ ಈ ಕೋತಿ. ಅದಕ್ಕಾಗಿ ಎಷ್ಟು ಜನ ಹಳಹಳಿಸ್ತಾರೆ. ಅದು ಬರುತ್ತೆ ಅಂತ ದಾರಿ ಕಾಯ್ತಾರೆ. ಅದು ಕಳೆದು ಹೋಗೇ ಇಲ್ಲ. ಕಾರಣ ಅದು ಹುಟ್ಲೇ ಇಲ್ಲ. ಆದರೆ ಅದರ ಅಸ್ತಿತ್ವ ಮಾತ್ರ ಇದೆ. ಹುಟ್ಟಿದ ಎಷ್ಟೋ ಕೋತಿಗಳು ಇಂಥ ದೊಂಬರಾಟ ದವರ ಕೈಗೆ ಸಿಕ್ಕು ಯಮಯಾತನೆ ಅನುಭವಿಸ್ತಾ ಇರ್‌ಬಹುದು. ಆದರೆ ಈ ಕೋತಿ ಎಷ್ಟೊಂದು ಸುಖಿ. ಭಾಗ್ಯವಂತ. ನಿಜಕ್ಕೂ ಭಾಗ್ಯಶಾಲಿ !
(ಯಾರೋ ಒಬ್ಬನ ಸುತ್ತ ಜನ ಸೇರುತ್ತಾರೆ. ಆ ಜನಗಳ ಮಧ್ಯ ಯಾರೋ ಒಬ್ಬ ಮಾಯವಾಗುತ್ತಾನೆ.)
(ಒಬ್ಬ ಹುಡುಗ ಜನಸಂದಣಿಯಲ್ಲಿ ಬಲೂನು ಊದುತ್ತ ಬರುತ್ತಿದ್ದಾನೆ. ಬಲೂನು ಮೇಲೆತ್ತಿ ಒಗೆಯುತ್ತಾನೆ. ಕೈಯಿಂದ ನೂಕುತ್ತಾನೆ. ಅವನ ಒಂದು ಕೈಯಲ್ಲಿ ಕಡಲೆ ಇದೆ. ಆಟ ಆಡುವಾಗ ಆತ ಮಧ್ಯೆ ಮಧ್ಯೆ ನಿಂತು ಕಡ್ಲೆ ಬಾಯಿಗೆ ಹಾಕಿಕೊಳ್ಳುತ್ತಾನೆ. ಯಾರೋ ಒಬ್ಬ ಜನ ಸಂದಣಿಯಿಂದ ಮುಂದೆ ಬರುತ್ತಾನೆ. ಆ ಹುಡುಗನ ಆಟ ನೋಡುತ್ತ ನಿಲ್ಲುತ್ತಾನೆ. ಕೆಲವು ಬಾರಿ ಆ ಹುಡುಗನ ಆಟದಲ್ಲಿ ಸಹಾಯ ಮಾಡುತ್ತಾನೆ. ಹುಡುಗ ನಂಬಿಕೆಯಿಂದ ತನ್ನ ಮುಷ್ಠಿಯಲ್ಲಿದ್ದ ಕಡ್ಲೆ ಕಾಳು ಯಾರೋ ಒಬ್ಬನ ಕೈಯಲ್ಲಿಡುತ್ತಾನೆ. ಆಟದ ನಡುವೆ ಒಂದೊಂದು ಕಡ್ಲೆ ಕಾಳು ಬಾಯಿಗಿಟ್ಟು ಕೊಳ್ಳುತ್ತಾನೆ. ಅವನ ಆಟಕ್ಕೆ ರಂಗೇರುತ್ತದೆ. ಅಷ್ಟರಲ್ಲಿ ಜನರ ಗುಂಪಿನಿಂದ ಒಬ್ಬ ಆ ಹುಡುಗನನ್ನು ಹುಡುಕುತ್ತ ಬರುತ್ತಾನೆ. ಆತ ಕಬ್ಬಿನ ಗಾಣದ ಧಣಿ. ಅವನ ಕೈಯಲ್ಲಿ ಒಂದು ಕಬ್ಬಿನ ಜಲ್ಲೆ ಇದೆ. ಅದನ್ನು ಆತ ಕೋಲಿನಂತೆ ಹಿಡಿದುಕೊಂಡಿದ್ದಾನೆ. ಬಂದವನೇ ಹುಡುಗನನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ.)

ಧಣಿ : ನಾನು ಜಾತ್ರೆಯಲ್ಲೆಲ್ಲ ನಿನ್ನನ್ನು ಹುಡುಕ್ತಾ ಇದ್ದೆ. ನೀನು ಆಟ ಆಡ್ತಾ ಇದ್ದೀಯ. ನಿನಗಿಲ್ಲಿ ಆಟ ಆಡೋಕ್ಕೆ ತಂದಿದ್ದೀವಾ ನಾವು ? ನಡಿ.

ಯಾರೋ ಒಬ್ಬ: ಹೋಗ್ಲಿ ಬಿಡಿ. ಚಿಕ್ಕ ಹುಡುಗ ಪಾಪ! ಚಿಕ್ಕಂದಿನಲ್ಲಿ ಆಡ್ದೆ ದೊಡ್ಡವರಾದ್ಮೇಲೆ ಆಡೋಕ್ಕಾಗುತಾ ?

ಧಣಿ : ಇವ ನನ್ನ ಮಗನಲ್ಲ.

ಯಾರೋ ಒಬ್ಬ : ಅದಕ್ಕಾಗಿ ದಬಾಯಿಸ್ತಿದೀರಾ ?

ಧಣಿ : ಅವನು ನನ್ನ ಮಗನಲ್ಲ ಇನ್ನಾರದೋ ಮಗಾ ಅಂತ ದಬಾಯಿಸ್ತಿಲ್ಲ. ಈತ ನಮ್ಮ ಕೆಲಸದವ. (ಕೂಲಿಯವ)

ಯಾರೋ ಒಬ್ಬ : ಏನು ? ಈ ಚಿಕ್ಕ ಹುಡುಗ ನಿಮ್ಮ ಕೆಲಸದವನೇ ?

ಧಣಿ : ಕೂಲಿ ಕೆಲ್ಸ ಮಾಡೋ ಕೆಲಗಾರ.

ಯಾರೋ ಒಬ್ಬ : ಇಂಥ ಚಿಕ್ಕ ಹುಡುಗ ?

ಧಣಿ : ನೀನು ಇವನು ತಿನ್ನೋವಾಗ ನೋಡಿಲ್ಲ.

ಯಾರೋ ಒಬ್ಬ : ಇಲ್ಲ. ಆದ್ರೆ ಇವ್ನ ಆಟ ಆಡ್ತಾ ಇದ್ದಾಗ ನೋಡಿದ್ದೀನಿ. ನಿಜವಾಗಿಯೂ ಈತ ಚಿಕ್ಕ ಹುಡುಗ.

ಧಣಿ : ಇರಲಿ ಹುಡುಗ.

ಯಾರೋ ಒಬ್ಬ : ಆದರೆ ಇಂಥ ಅಮಾಯಕ ಹುಡುಗರನ್ನು ಕೆಲಸಕ್ಕಿಟ್ಟುಕೊಳ್ಳೋದು ಸರಿಯಲ್ಲ.

ಧಣಿ : ಯಾಕೆ ಸರಿಯಲ್ಲ. ಇಂಥ ಹುಡುಗ್ರು ಕಳವು ಮಾಡಿದ್ರೆ ಆಗುತ್ತಾ ?

ಯಾರೋ ಒಬ್ಬ : ಎಂಥ ಕಳ್ಳತನ ?

ಧಣಿ : ಇವನು ಇವ್ನ ಮನೇಲಿದ್ದ ಒಂದು ವಸ್ತುವೂ ಇಡ್ತಿರಲಿಲ್ಲ. ಆದರಿಂದ ಇವನಪ್ಪ ತಂದು ನಮ್ಮನೇಲಿ ಕೆಲ್ಸಕ್ಕಿಟ್ಟ. ಗಂಜಿ, ರೊಟ್ಟಿ, ಬಿಸ್ಕೀಟು ಒಂದೂ ಬಿಡ್ತಿರಲಿಲ್ಲ. ಏನೂ ಸಿಗ್‌ದಿದ್ರೆ ಮಡ್ಕೇಲಿಟ್ಟ ಅಕ್ಕೀನೇ ತಿಂದು ಹಾಕ್ತಿದ್ನಂತೆ !

ಯಾರೋ ಒಬ್ಬ : ಇಷ್ಟೆಲ್ಲ ಕದ್ದು ತಿನ್ನೋವ್ನು ಹಾಲು, ಬೆಣ್ಣೆ ಮೊಸರು ಕದ್ದು ತಿಂತಿರಲಿಲ್ವೆ?

ಧಣಿ : ಬೆಣ್ಣೆ ಮೊಸರು ತಿನ್ನೋಕ್ಕೆ ಅವನೇನು ಗೋಕುಲದ ಕೃಷ್ಣನಲ್ಲ. ದರಿದ್ರನೊಬ್ಬನ ಮಗ.

ಯಾರೋ ಒಬ್ಬ : ಅದಕ್ಕೇ ನೀನು ತಂದು ಅಂಗಡೀಲಿ ಕಟ್ಟಿ ಹಾಕಿದ್ದೀ.

ಧಣಿ : ಗೂಡಂಗಡಿಗೆ ಕಟ್ಟಿದ್ದಲ್ಲ. ನಮ್ಮ ಕಬ್ಬಿನ ಗಾಣ ಇದೆ. ಈ ಹುಡುಗ ಗಾಣ ತಿರುಗಿಸ್ತಾನೆ.

ಯಾರೋ ಒಬ್ಬ : ಈ ಚಿಕ್ಕ ಹುಡುಗ ಗಾಣದ ಚಕ್ರ ತಿರುಗಿಸ್ತಾನೆಯೆ ? ಅಂದ್ರೆ ಶ್ರೀಕೃಷ್ಣನ ಅವತಾರ !

ಧಣಿ : ನಿಮ್ಮ ಪುರಾಣ ಕೇಳ್ತಾ ಇದ್ರೆ ಇಲ್ಲೇ ಬೆಳಕಾಗತ್ತೆ. (ಹುಡುಗನಿಗೆ) ಏಯ್.

ಯಾರೋ ಒಬ್ಬ : ಇರು. ಈ ಹೊತ್ತು ಅವನ ಪರವಾಗಿ ನಾನೇ ಚಕ್ರ ತಿರುಗಿಸ್ತೀನಿ.

ಧಣಿ : ನೀವು ? ಯಾಕೆ ?

ಯಾರೋ ಒಬ್ಬ : ಹುಡುಗ ಈ ಹೊತ್ತು ಜಾತ್ರೇಲಿ ಚೆನ್ನಾಗಿ ಆಡಿಕೊಂಡಿರ್‍ಲಿ. ನೀನು ಈ ಹುಡುಗನಿಗೆ ಕೊಡ್ತೋ ಒಂದು ದಿನದ ಸಂಬಳ ನನ್ಗೆ ಕೊಟ್ರೆ ಸಾಕು. ನಾನು ನಿನ್ನ ಕೆಲ್ಸ ಮಾಡ್ತೀನಿ. ಮೇಲಾಗಿ ಅವನಿಗಿಂತ ಜಾಸ್ತಿ ಕೆಲ್ಸ ಮಾಡ್ತೀನಿ.

ಧಣಿ : ನೋಡಪ್ಪ, ನಾನೊಬ್ಬ ಅಂಗಡಿಕಾರ. ಸಮಾಜ ಸೇವಕ ಅಲ್ಲ. ಒಂದ್ ಬಾರಿ ಇವ್ನಿಗೆ ದುಡ್ಡಿನ ರುಚಿ ಹತ್ತಿದ್ರೆ ಮತ್ತಿವನು ಕೈಗೆ ಸಿಗ್ತಾನೆಯೆ ? ನೀವು ಅವನ ಬದಲು ಕೆಲ್ಸ ಮಾಡ್‌ಬಹುದು. ಆದರೆ ನಾನು ಒಂದೊಂದ್ ಬಾರಿ ಅವನ ಮೇಲೆ ರೇಗ್ತೀನಿ. ಕೆಲವು ಬಾರಿ ಕೆನ್ನೆಗೇಟೂ ಕೊಡ್ತೀನಿ. ಇದೆಲ್ಲ ನಿನ್ಗೆ ಹೇಗೆ ಕೊಡಲಿ ಹೇಳು.

ಯಾರೋ ಒಬ್ಬ : ನೀವು ರೇಗುವಂತೆ, ಕೆನ್ನೆಗೇಟು ಕೊಡುವಂಥ ಪ್ರಸಂಗಾನೇ ನಾನು ತರೋದಿಲ್ವಲ್ಲ.

ಧಣಿ : ಅವನು ತಪ್ಪು ಮಾಡಿದ್ರೇನೆ ತಟ್ತೀನಿ ಅಂತ ಅಂದ್ಕೊಂಡ್ರಾ ? ಆಗಾಗ್ಗೆ ತಟ್ಟೊ, ರೇಗೊ ಅಭ್ಯಾಸ ಇರೋದ್ರಿಂದ ಈತ ಬಲಿಯಾಗ್ತಾನೆ ಅಷ್ಟೆ. ಕೆಲವು ಬಾರಿ ಗಿರಾಕಿಗಳ ಮೇಲಿನ ಸಿಟ್ಟು ಈ ಹುಡುಗನ ಮೇಲೆ ತೀರಿಸಿಕೊಳ್ಳಬೇಕಾಗುತ್ತೆ. ಮನಸ್ಸಿಗೆ ಕೊಂಚ ನೆಮ್ಮದಿ ಸಿಗುತ್ತೆ. ಅಲ್ಲದೆ ಅವನಿಗೆ ಕೊಡೋ ಕಾಸು ನಿನ್ಗೆ ಸಾಕಾಗುತ್ತದೆಯೆ ?

ಯಾರೋ ಒಬ್ಬ : ಹೌದು.

ಧಣಿ : ಈಗ ಹಾಗೆ ಹೇಳ್ತೀರಿ. ಕೆಲಸಕ್ಕೆ ಸೇರಿದ ಮೇಲೆ ಲೆಕ್ಕಾಚಾರಕ್ಕಿಳಿತೀರಿ. ತಾತ್ಪರ್ಯ. ನನ್ಗೆ ಈ ಹುಡುಗನೇ ಸಾಕು, ನೀವು ಬೇಡ.

ಯಾರೋ ಒಬ್ಬ : (ತಡೆಯುತ್ತ) ನಿಲ್ಲಿ. ನಾನು ನಿಮ್ಗೆ ಈ ಹುಡುಗನನ್ನು ಒಯ್ಯೋಕ್ಕೆ ಬಿಡೋದಿಲ್ಲ.

ಧಣಿ : ಒಯ್ಯೋಕ್ಕೆ ಬಿಡೋಲ್ವೆ ? ಏಕೆ ?

ಯಾರೋ ಒಬ್ಬ : ಅವನ ಆಟ ಮುಗೀಲಿಲ್ಲ ಇನ್ನು. ಅವನದೊಬ್ಬಂದೆ ಅಲ್ಲ ನನ್ನದೂ.

ಧಣಿ : ವ್ಹಾ ! ನನ್ನ ಹೊಟ್ಟೆಗಿಲ್ಲಿ ಬೆಂಕಿ ಬಿದ್ದಿದೆ. ಮತ್ತೆ ನೀವು ಇಲ್ಲಿ ಆಟ ಆಡ್ತಿದೀರ.

ಯಾರೋ ಒಬ್ಬ : ನನ್ನ ಆಟ ಏಕೆ ಮುರೀತೀರಿ ?

ಧಣಿ : ಆಟ ಅಂತ್ಲೆ ಮುರೀತೀನಿ. ಆಟದಿಂದ ಹೊಟ್ಟೆ ತುಂಬೋಲ್ಲ.

ಯಾರೋ ಒಬ್ಬ : ಬದುಕು ತುಂಬುತ್ತೆ.

ಧಣಿ : ಬದುಕು ತುಂಬುತ್ತೊ. ಹೊಟ್ಟೆಗೆ ಬೆಂಕಿ ಇಟ್ಕೊಂಡು ಬದುಕು ತುಂಬಿದರೇನು ಬಂತು ? ಬಿಡು ನನ್ನ ದಾರಿ.

ಯಾರೋ ಒಬ್ಬ : ನಾನು ಈ ಬಾಲಕನನ್ನು ಒಯ್ಯೋಕ್ಕೆ ಬಿಡೋದಿಲ್ಲ.

ಧಣಿ : ಬಿಡೋದಿಲ್ವೆ ? ಅಲ್ಲಿ ಗಾಣದ ಚಕ್ರ ನಮ್ಮಪ್ಪ, ಶ್ರೀಕೃಷ್ಣ ಬಂದು ತಿರುಗಿಸ್‌ಬೇಕೆ ?

ಯಾರೋ ಒಬ್ಬ : ಇಬ್ಬರಲ್ಲಿ ಯಾರು ನಿಜವಾಗಿ ಇರ್ತಾರೋ ಅವರು ತಿರುಗಿಸ್ತಾರೆ.

ಧಣಿ : ನೋಡೋಕ್ಕೆ ಪೆದ್ದು ಪೆದಾಗಿದ್ದೀಯ, ಯಾರು ನೀನು ?

ಯಾರೋ ಒಬ್ಬ : ನಾನು ಯಾರೋ ಒಬ್ಬ.

ಧಣಿ : ಯಾರೋ ಒಬ್ಬ ?

ಯಾರೋ ಒಬ್ಬ : ಜಾತ್ರೇಲಿ ಏನೇನೊ ಕಳೆದುಹೋಗುತ್ತದಂತೆ. ಈ ಜಾತ್ರೇಲಿ ನನ್ನ ಹೆಸರೇ ಕಳೆದುಹೋಗಿದೆ.

ಧಣಿ : ಓ...ಹೌದಾ. ಈ ಜಾತ್ರೆಯ ಮಹಿಮೆ ನಿಮ್ಗೆ ಗೊತ್ತಿಲ್ಲಾಂತ ಕಾಣತ್ತೆ. ಜಾತ್ರೆಯಲ್ಲಿ ಕಳೆದು ಹೋದದ್ದು ಕೊನೆಗೊಮ್ಮೆ ಸಿಕ್ಕುತ್ತದೆ.

ಯಾರೋ ಒಬ್ಬ : ಕಣ್ಣಿಗೆ ಕಾಣೋದು ಸಿಕ್ಕುತ್ತೆ-ಕಾಣದೇ ಇರೋದು.

ಧಣಿ : ನನ್ನ ಗಾಣದ ಚಕ್ರಕ್ಕಿಂತ ನಿನ್ನ ತಲೆ ಜೋರಾಗಿ ಓಡತ್ತೆ.

ಯಾರೋ ಒಬ್ಬ : ಭಗವಾನ್ ಶ್ರೀಕೃಷ್ಣನ ಕೃಪೆ.

ಧಣಿ : ನೀನು ಬುದ್ಧಿಯಿಂದ ಜಾಣ ಅಂತ ಒಂದ್‌ಮಾತು ಹೇಳ್ತೀನಿ. ನನ್ನ ಗಾಣದ ಮೇಲೆ ಕೆಲಸ ಮಾಡುವಂಥ ಸಂತೋಷ ಬೇರೆಲ್ಲೂ ಸಿಗೋಲ್ಲ. ಚಕ್ರಕ್ಕೆ ಗೆಜ್ಜೆ ಕಟ್ಟಿದ್ದೀನಿ. ಚಕ್ರ ತಿರುಗುತ್ತಿದ್ದಂತೆ ಗೆಜ್ಜೆಯ ಮಂಜುಳ ನಾದ ಕೇಳಿ ಬರುತ್ತದೆ. ಚಕ್ರ ಎಷ್ಟು ಜೋರಾಗಿ ತಿರುಗುತ್ತೊ ಅಷ್ಟು ಜೋರಾದ ಮಧುರ ನಾದ ಕೇಳಿ ಬರುತ್ತೆ. ಅದು ಕೆಳಗಿಳಿಯುವ ಕಬ್ಬಿನ ರಸಕ್ಕಿಂತ ಸಿಹಿ. ಚಕ್ರ ಸುದರ್ಶನದಂತೆ ಸುತ್ತುತ್ತ, ಸುತ್ತುತ್ತ ಸಿಹಿಯಾದ ರಸ ಇಳಿಸುತ್ತೆ. ಭಗವಾನ್ ಶ್ರೀಕೃಷ್ಣ ಮಹಾರಾಜಕೀ ಜಯ್.

ಹುಡುಗ : ಕಡ್ಲೆ...ಕಡ್ಲೆ.

ಯಾರೋ ಒಬ್ಬ : ಕಡ್ಲೆ...(ಮುಷ್ಟಿಯಲ್ಲಿ ನೋಡಿ) ನೋಡು ಒಂದೇ ಒಂದು ಕಡ್ಲೆಕಾಳು ಇದೆ. ಗಾಣದ ಧಣಿಯೇ ಈ ಕೊನೆಯ ಕಡ್ಲೆ ಅವನು ತಿನ್ನಲಿ. (ಧಾವಿಸಿ...) ತಗೋಳಪ್ಪ ನಿನ್ನ ಕಡ್ಲೆ ಕಾಳು.

(ಹುಡುಗ ಕೈ ಮುಂದೆ ಮಾಡುತ್ತಾನೆ. ಕಡ್ಲೆ ಅವನ ಕೈಯಿಂದ ಜಾರಿ ಕೆಳಗೆ ಬೀಳುತ್ತದೆ. ಹುಡುಗನನ್ನು ಧಣಿ ದರದರ ಎಳೆದುಕೊಂಡು ಹೋಗುತ್ತಾನೆ. ಕಡ್ಲೆ ಇನ್ನೊಂದು ಕಡೆ ಬೀಳುತ್ತದೆ. ಯಾರೋ ಒಬ್ಬ ಕಡ್ಲೆಕಾಳು ತುಳಿದು ಓಡುತ್ತಾನೆ. ಕಡ್ಲೆಯನ್ನು ಸೂಕ್ಷ್ಮವಾಗಿ ನೋಡುತ್ತಾನೆ.

ಹಿನ್ನೆಲೆಯಲ್ಲಿ ಗಾಣದ ಸದ್ದು, ಗೆಜ್ಜೆಯ ಸದ್ದು ಕೇಳಿ ಬರುತ್ತದೆ. ಸ್ವಲ್ಪ ಹೊತ್ತು ಆಲಿಸುತ್ತ ನಿಲ್ಲುತ್ತಾನೆ. ಕೊನೆಗೆ ಮಾತಾಡತೊಡಗುತ್ತಾನೆ)

ಯಾರೋ ಒಬ್ಬ : ಹುಡುಗನ ಹತ್ರ ಇರೋ ಕಡ್ಲೆ ಕಾಳು ಕಳೆದು ಹೋಗಿದೆ. ತುಂಬಿದ ಜಾತ್ರೆಯಲ್ಲಿ ಯಾವುದೋ ಹುಡುಗನ ಕಡ್ಲೇಕಾಳು ಕಳೆದು ಹೋಗಿದೆ. ಭಗವಾನ್ ಶ್ರೀಕೃಷ್ಣಾ ನಿನ್ನ ಬಾಲ್ಯದಲ್ಲಿ ಇಂಥ ಕಡ್ಲೆಕಾಳು ಕಳೆದು ಹೋಗಿದ್ರೆ ಎಂಥ ಅನಾಹುತವಾಗ್ತಿತ್ತು. ನಿನ್ನ ಸಂಗಡಿಗರು ದನಗಾಹಿಗಳೆಲ್ಲ ಗೋಕುಲವನ್ನೆಲ್ಲ ತುಳಿದು ಧೂಳೆಬ್ಬಿಸಿ ಬಿಡುತ್ತಿದ್ದರು. ತಮ್ಮ ಕೆಲಸ ಕಾರ್ಯ ಬಿಟ್ಟು ಗೋಪಿಕಾಸ್ತ್ರೀಯರೆಲ್ಲ ಕಡ್ಲೇ ಕಾಳಿನ ಶೋಧದಲ್ಲಿ ತೊಡಗುತ್ತಿದ್ದರೇನೋ ? ಯಶೋಧೆಯ ಹಣೆಯಲ್ಲಿ ನೂರು ಗೆರೆ ಮೂಡುತ್ತಿದ್ದುವೇನೋ? ಕಡ್ಲೆ ಸಿಗುವವರಿಗೆ ಎಷ್ಟೋ ಜನಕ್ಕೆ ಅನ್ನ ರುಚಿಸುತ್ತಿರಲಿಲ್ಲವೇನೊ! ಈಗ? ಆ ಬಡಪಾಯಿ ಹುಡುಗನ ಕೈಯಿಂದ ಕಡ್ಲೆ ಕಳೆದು ಹೋದ್ರೆ ಯಾರಿಗೂ ಅದರ ಬಗ್ಗೆ ಚಿಂತೆಯಿಲ್ಲ. ಭಗವಾನ್ ಚಕ್ರಧಾರಿ. ನಿನ್ನ ಸುದರ್ಶನದಿಂದ ಈ ಶಿಶುಪಾಲನ ರಕ್ತದೋಕುಳಿಯಾಡಿದೆ. ಆದರೆ ಈ ಚಕ್ರ ಗೆಜ್ಜೆ ಕಟ್ಟಿಕೊಂಡು ಬಡಬಾಲಕನ ಬದುಕನ್ನು ಜಜ್ಜಿ ಹಾಕಿದೆ. ನಿನ್ನ ಆ ಚಕ್ರದ ಧರ್ಮ ಏನಾಗಿತ್ತು. ಸುಮ್ನೆ ಸುತ್ತೋದೆ ? ಜನರ ರಕ್ತ ಹೀರೋದೆ ? ಅಥವಾ ಸುತ್ತುತ್ತ ಸುತ್ತುತ್ತ ರಕ್ತದೋಕುಳಿ ಆಡೋದೆ. ಯಾರು ಉತ್ತರ ಕೊಡ್ತಾರೆ. ಈ ಜಾತ್ರೆಯಲ್ಲಿನ ಮಂದಿ? ಇವರು ಬದುಕನ್ನು ತಡೆಹಿಡಿಯುವ ತಂತ್ರ ಹುಡುಕಿ ತೆಗೆದಿದ್ದಾರೆ. ಮಕ್ಕಳ ಬಾಲ್ಯ ಕಾಪಾಡುವ ಮಂತ್ರಕ್ಕೆ ಮುಕ್ತಿ ಕೊಟ್ಟಿದ್ದಾರೆ. ಹುಡುಗನ ಕೈಯಲ್ಲಿದ್ದ ಕಡ್ಲೆ ಕಳೆದುಹೋಗಿದೆ. ಹುಡುಗನ ಕೈಯಿಂದ ಜಾರಿ ಕಡ್ಲೆ ಕಳೆದ್ಹೋಗಿದೆ.

(ಅಷ್ಟರಲ್ಲಿ ಜನಸಂದಣಿಯಿಂದ ಒಬ್ಬ ಹೊರಗೆ ಬರುತ್ತಾನೆ. ಆತ ಒಬ್ಬ ಯುವಕ. ಆದರೆ ಹುಡುಗನಂತೆ ವೇಷ ಧರಿಸಿದ್ದಾನೆ. ಕೈಯಲ್ಲಿ ತುಂಬ ಬಲೂನುಗಳಿವೆ. ಅವನು ಒಂದೆಡೆ ನಿಂತು ಸಂಜ್ಞೆಮಾಡಿ 'ಯಾರೋ ಒಬ್ಬ'ನನ್ನು ಕರೆಯುತ್ತಾನೆ. ಯಾರೋ ಒಬ್ಬ ನಿದಾನವಾಗಿ ಅವನ ಕಡೆ ಹೆಜ್ಜೆ ಹಾಕುತ್ತಾನೆ.)

ಯುವಕ : ತಗಳ್ಳಿ.

ಯಾರೋ ಒಬ್ಬ : ಏನು ?

ಯುವಕ : ದುಡ್ಡು.

ಯಾರೋ ಒಬ್ಬ : ಯಾವ ದುಡ್ಡು ?

| | |
|---|---|
| ಯುವಕ : | ಮೊದ್ಲು ತಗೊ. ಆಮೇಲೆ ಹೇಳ್ತೀನಿ. (ಯಾರೋ ಒಬ್ಬ ದುಡ್ಡು ತೆಗೆದುಕೊಳ್ಳುತ್ತಾನೆ.) ಈಗ ನನಗೆ ಕಲಿಸು. |
| ಯಾರೋ ಒಬ್ಬ : | ಏನ್ ಕಲಿಸಲಿ ? |
| ಯುವಕ : | ಬಲೂನಿನಿಂದ ಆಡೋದನ್ನ. |
| ಯಾರೋ ಒಬ್ಬ : | ಏನು ? ಬಲೂನಿನಿಂದ ಆಡೋದನ್ನು ನಿನಗೆ ಕಲಿಸೋದೆ ? |
| ಯುವಕ : | ನೀನು ಆಗ ಆ ಹುಡುಗನ ಜೊತೆ ಬಲೂನಿನಾಟ ಆಡ್ತಿರಲಿಲ್ವೆ ? |
| ಯಾರೋ ಒಬ್ಬ : | ಅವನು ಒಬ್ಬ ಚಿಕ್ಕ ಬಾಲಕನಾಗಿದ್ದ. |
| ಯುವಕ : | ನಾನೂ ಚಿಕ್ಕ ಹುಡುಗನೇ. |
| ಯಾರೋ ಒಬ್ಬ : | ನಿನ್ನ ವಯಸ್ಸೆಷ್ಟು ? |
| ಯುವಕ : | ಕೇವಲ ಮೂವತ್ತೈದು ವರ್ಷ. |
| ಯಾರೋ ಒಬ್ಬ : | ನಿನ್ನಂಥ ಹುಡುಗನ ವಯಸ್ಸು ಇಷ್ಟೇನೆ ? ಈ ಜಾತ್ರೇಲಿ ಅರವತ್ತು ವರ್ಷದ ಹುಡುಗರೂ ಇರ್‌ಬಹುದು. ನೀನು ಇಷ್ಟು ಬೇಗ ಬಲೂನಾಟ ಆಟ ಆಡೋಕ್ಕೆ ಶುರು ಮಾಡಿಬಿಟ್ಟೆಯಲ್ಲ. (ಆ ಯುವಕನಿಗೆ ಯಾರೋ ಒಬ್ಬನ ಮಾತಿನ ಮರ್ಮ ಗೊತ್ತಾಗುತ್ತದೆ. ಅವನು ಕೊಂಚ ನಿಸ್ತೇಜನಾಗುತ್ತಾನೆ.) |
| ಯುವಕ : | ನನ್ನ ಹುಡುಗತನ ನೀನೇಕೆ ಘಾಸಿಗೊಳಿಸ್ತೀಯ ? |
| ಯಾರೋ ಒಬ್ಬ : | ನಿನಗೆ ಏನಾಗಿದೆ ? |
| ಯುವಕ : | ಏನ್ ಮಾಡೋದು ? ನನ್ನ ಚಿಕ್ಕಂದಿನಲ್ಲಿ ಬಲೂನು ಆಟ ಆಡಬೇಕಂತ ಇಷ್ಟ ಇತ್ತು. ಆದ್ರೆ ಆಗ ಬಲೂನೂ ಕೊಂಡ್ಕೊಳ್ಳೋ ತಾಕತ್ತು ಇರ್ಲಿಲ್ಲ. ಈಗ ತಾಕತ್ತಿದೆ. ಆದ್ರೆ ಆಟ ಆಡೋಕ್ಕೆ ಬರಲ್ಲ. |
| ಯಾರೋ ಒಬ್ಬ : | ಆ ಮನುಷ್ಯನ ಕಥೆ ನಿನ್ಗೆ ಗೊತ್ತಿದೆಯೆ ? |
| ಯುವಕ : | ಯಾರದ್ದು ? |
| ಯಾರೋ ಒಬ್ಬ : | ಅವನೊಬ್ಬನಿದ್ನಂತೆ. ಅವನು ಪ್ರತಿ ಜಾತ್ರೆಗೂ ಬರ್ತಿದ್ನಂತೆ. ಅವನ ಜೇಬಿನಲ್ಲಿ ದುಡ್ಡು ತುಂಬಿ ತುಳುಕುತ್ತಿತ್ತು. ಅವನ ಹಲ್ಲು ತುಡಿಯುತ್ತಿತ್ತು. |
| ಯುವಕ : | ಅಂದರೆ ? |
| ಯಾರೋ ಒಬ್ಬ : | ಅಂದ್ರೆ ಅವ್ನಿಗೆ ಕಡ್ಲೆ ತಿನ್ನಬೇಕೂಂತ ಅನ್ನಿಸುತ್ತಿತ್ತು. |
| ಯುವಕ : | ಮತ್ತೆ ಅವನು ತಿನ್ನುತಾ ಇರಲಿಲ್ವೆ ? |
| ಯಾರೋ ಒಬ್ಬ : | ಏನ್ ಮಾಡೋದು ಆ ಜಾತ್ರೇಲಿ ಕಡ್ಲೇನೇ ಬರ್ತಿರಲಿಲ್ಲ. |
| ಯುವಕ : | ಹೌದೇ ? |
| ಯಾರೋ ಒಬ್ಬ : | ಅದೊಂದು ವರ್ಷ ಜಾತ್ರೆಯಲ್ಲಿ ರಾಶಿಗಟ್ಲೆ ಕಡ್ಲೆ ಬಂತು. |

ಯುವಕ : ಆಗ ಆತ ತನ್ನಾಶೆ ಪೂರೈಸಿಕೊಂಡಿರಬಹುದಲ್ವೆ ?

ಯಾರೋ ಒಬ್ಬ : ಇಲ್ಲ, ಅವನ ಜೇಬು ಹರಿದು ಹೋಗಿತ್ತು ಹಲ್ಲುಗಳೊಂದೂ ಇರಲಿಲ್ಲ.

ಯುವಕ : ಅರೆ !

ಯಾರೋ ಒಬ್ಬ : ತಗೊ...ನಿನ್ನ ದುಡ್ಡು. (ದುಡ್ಡು ಕೊಡುತ್ತಾನೆ)

ಯುವಕ : ನೀನು ನನ್ಗೆ ಆಟ ಕಲಿಸೋದಿಲ್ವೆ ?

ಯಾರೋ ಒಬ್ಬ : ತಾ...ಒಂದು ಬಲೂನು ಕೊಡು.

(ಅವನ ಕೈಯಿಂದ ಒಂದು ಬಲೂನು ಪಡೆದು ಒಡೆದು ಹಾಕುತ್ತಾನೆ)

ಯುವಕ : ನೀನು ನನ್ನ ಬಲೂನು ಒಡೆದು ಹಾಕಿ ಬಿಟ್ಟೆಯಾ ? ನನ್ನ ನಾಲ್ಕಾಣೆ ವ್ಯರ್ಥ ಮಾಡಿದೆ.

ಯಾರೋ ಒಬ್ಬ : ಈಗ ಯಾವ ಕರ್ಮಕ್ಕೆ ಆಡ್ತೀಯಾ ? ನಿನ್ನ ಬಾಲ್ಯ ಕಳೆದು ನೀನೀಗ ಯೌವನದಲ್ಲಿದ್ದೀ. ಹೋಗು...ಈ ಬಲೂನುಗಳನ್ನು ಹುಡುಗರಿಗೆ ಹಂಚಿ ಬಿಡು.

ಯುವಕ : ಸುಮ್ನೆ...ಪುಕ್ಕಟೆ ಹಂಚಿ ಬಿಡೋದೇ ? ಅದಕ್ಕೆ ನಾನು ದುಡ್ಡು ಕೊಟ್ಟಿಲ್ಲವೆ ? ಈಗ ಆಡೋಕ್ಕೆ ಬರ್ದಿದ್ರೂ ಮುಂದೆಂದಾದರೂ ಕೆಲ್ಸಕ್ಕೆ ಬಂದೀತು.

(ಹಾಗೆ ಹೇಳುತ್ತ ಚಿಕ್ಕ ಮಕ್ಕಳಂತೆ ಅಭಿನಯ ಮಾಡುತ್ತ ಹೋಗುತ್ತಾನೆ.)

(ಜಾತ್ರೆಗೆ ಬಂದ ಒಂದು ಹುಡುಗಿ ಮತ್ತು ತಂದೆ ಬರುತ್ತಾರೆ)

ತಂದೆ : ನೀನು ಇಲ್ಲೇ ಇರು. ನಾನು ಬೇಗ ಬಂದ್ಬಿಡ್ತೀನಿ.

ಹುಡುಗಿ : ಅಪ್ಪಾ, ನಾನೇಕೆ ಬರೋದ್ ಬೇಡ.

ತಂದೆ : ಮೇಲೆ ತುಂಬ ಜನಾ ಇರ್ತಾರೆ. ಕಾಲಿಡೋದೆ ಕಷ್ಟ.

ಹುಡುಗಿ : ಆಗಲಿ...ಅದ್ಕೇನಂತೆ ? ನೀವು ಹೋಗೋದಿಲ್ವೆ ಆ ಗದ್ದಲದಲ್ಲಿ.

ತಂದೆ : ಹುಡುಗೀರು ಜನಸಂದಣಿಯಲ್ಲಿ ಬರೋದು ಸರಿಯಲ್ಲ. ಹುಡುಗೀರು ಇದ್ದಾರೆ ಅಂದ್ರೆ ಇನ್ನಷ್ಟು ಗದ್ದಲ ಜಾಸ್ತಿಯಾಗುತ್ತೆ. ಯುವಕರ ನೂಕು ನುಗ್ಗಲು ಶುರುವಾಗುತ್ತೆ.

ಹುಡುಗಿ : ಯಾಕೆ ?

ತಂದೆ : ಯಾಕೆ ಅಂದ್ರೆ ? ನಿನಗೆ ಅಷ್ಟೂ ಗೊತ್ತಾಗಲ್ವೆ ? ಗೊತ್ತಾಗ್ದೆ ಇರೋದೆ ವಾಸಿ.

ಹುಡುಗಿ : ನಾನು ಇಲ್ಲೇ ನಿಂತಿರಲೆ ?

ತಂದೆ : ಹೌದು. ನೀನು ಇಲ್ಲೇ ಇರು. ನಾನು ದೇವರ ದರ್ಶನ ಮುಗಿಸ್ಕೊಂಡು ತಕ್ಷಣ ಬಂದ್ ಬಿಡ್ತೀನಿ.

ಹುಡುಗಿ : ಅಪ್ಪಾ, ನಾನು ಹೇಳಿದ್ದು ನೆನಪಿದೆಯಲ್ಲ.

ತಂದೆ : ನಿನ್ಗೆ ಬೇಕಾದ್ದೆಲ್ಲ ತಗೊಳ್ಳೋಣ.

ಹುಡುಗಿ : ನನ್ನ ಹತ್ರ ಒಂದೂ ದುಡ್ಡಿಲ್ಲ.

ತಂದೆ : ನಾನಿದ್ದಾಗ ನಿನ್ನ ಹತ್ರ ದುಡ್ಡೇಕೆ ಬೇಕು. ಯಾರಾದರೂ ಏಮಾರಿಸಿದ್ರೆ ಅದೊಂದು ತಲೆನೋವು.

ಹುಡುಗಿ : ಬೇಗ ಬಂದ್‌ಬಿಡ್ತೀಯಲ್ಲ.

ತಂದೆ : ತಕ್ಷಣ ಬಂದ್ ಬಿಡ್ತೀನಿ. (ಹೋಗಲು ಮುಂದೆ ಎರಡು ಹೆಜ್ಜೆ ಇಟ್ಟು ಹಿಂದಕ್ಕೆ ಬರುತ್ತಾನೆ) ನೋಡು, ಇಲ್ಲಿಂದ ಎಲ್ಲೂ ಕದಲಬೇಡ. ನಂಗೆ ಬರೋಕ್ಕೆ ತಡವಾದ್ರೂ ಆಗಬಹುದು. ಬರೋವರ್ಗೂ ಅಲ್ಲಾಡ ಬೇಡ. ಇಲ್ಲೇ ನಿಂತಿರು.

(ತಂದೆ ಹೋಗುತ್ತಾನೆ. ಹುಡುಗಿ ಕುತೂಹಲದಿಂದ ಆಚ್ಚರಿಯಿಂದ, ಸಂತೋಷದಿಂದ ಜಾತ್ರೆ ವೀಕ್ಷಿಸುತ್ತಿದ್ದಾಳೆ. ತುಂಬ ಹೊತ್ತಿನಿಂದ ಆವಳನ್ನೇ ನೋಡುತ್ತಿದ್ದ, ಕಾಯುತ್ತಿದ್ದ ಸಮಯಸಾಧಕ ಲಂಪಟನೊಬ್ಬ ಬರುತ್ತಾನೆ)

ಸಮಯ ಸಾಧಕ : ಮೆಚ್ಚುಗೆಯಾಯ್ತೆ ?

ಹುಡುಗಿ : (ಮೈತೆಗೆದು...ಗಾಬರಿ)

ಸಮಯ ಸಾಧಕ : ಅಂಜೋದೇಕೆ ? ಮೊದಲನೆ ಸಲ ಜಾತ್ರೆಗೆ ಬಂದಿದ್ದೀಯಾ ?

ಹುಡುಗಿ : (ಕತ್ತಿನಿಂದಲೆ 'ಹೌದು' ಎನ್ನುತ್ತಾಳೆ)

ಸಮಯ ಸಾಧಕ : ಅದ್ಕೆ ದಿಗಿಲುಗೊಂಡಿದ್ದೀ. ಆಮೇಲೆ ನಾಚಿಕೆ, ಮರ್ಯಾದೆ, ಸಂಕೋಚ ಎಲ್ಲಾ ಜಾರಿ ಬಿಡುತ್ತೆ. ಹೇಗನ್ನಿಸ್ತು ?

ಹುಡುಗಿ : ಏನು ?

ಸಮಯ ಸಾಧಕ : ಜಾತ್ರೆ.

ಹುಡುಗಿ : (ಸ್ವಗತ) ನಿನ್ನಪ್ಪಂದೇನು ?

ಸಮಯ ಸಾಧಕ : ನೀನೇನು ಮೂಕಿಯೆ ?

ಹುಡುಗಿ : ಅಲ್ಲ.

ಸಮಯ ಸಾಧಕ : ಮತ್ತೆ ?

ಹುಡುಗಿ : (ದೊಡ್ಡಕ್ಕೆ) ಕಿವುಡಿ !

ಸಮಯ ಸಾಧಕ : ವ್ಹಾ...ನೀನು ತುಂಬಾ ಜಾಣೆ.

ಹುಡುಗಿ : ಇರಕೂಡದೆ ?

ಸಮಯ ಸಾಧಕ : ಯಾಕಿರಬಾರದು. ಜಾಣತನ ಇರಲೇಬೇಕು. ಇಲ್ಲದಿದ್ರೆ ಈ ಜಾತ್ರೇಲಿ ಹೆದರಿಕೆ ಇದ್ದೇ ಇದೆ.

ಹುಡುಗಿ : ಏನು ?

ಸಮಯ ಸಾಧಕ : ಕಳೆದು ಹೋಗೋದು.

ಹುಡುಗಿ : ಕಳೆದು ಹೋಗೋಕೆ ನಾನೇನು ದನವೆ ?

ಸಮಯ ಸಾಧಕ : ದನಗಳಿಗಿಂತ ಮನುಷ್ಯರೆ ಜಾಸ್ತಿ ಕಳೆದು ಹೋಗ್ತಾರೆ.

ಹುಡುಗಿ : ನನಗೆ ಗೊತ್ತಿಲ್ಲ.

ಸಮಯ ಸಾಧಕ : ನೀನೊಬ್ಬೇನೆ ?

ಹುಡುಗಿ : ಆಂ ? ನೀನೇನ್ ತಿಳ್ಕೊಂಡೆ...ನಾನು ಕಳೆದು ಹೋದವಳೂಂತ... ನಿನ್ನ ದಾರಿ ನೋಡು.

ಸಮಯ ಸಾಧಕ : ಅಂದ್ರೆ ?

ಹುಡುಗಿ : ನಾನು ಕಳೆದು ಹೋಗುವ ದಾರಿ ಕಾಯ್ತಾ ಇರು.

ಸಮಯ ಸಾಧಕ : ಎಷ್ಟೊತ್ತು ?

ಹುಡುಗಿ : (ನಿರ್ಭಿಡೆಯಿಂದ) ಹೊರಡು.

ಸಮಯ ಸಾಧಕ : (ಅವಳನ್ನು ನೋಡುತ್ತ ನಿಂತಿದ್ದಾನೆ)

ಹುಡುಗಿ : ಏನ್ ನೋಡ್ತಾ ಇದ್ದೀಯಾ ಹೀಗೆ ?

ಸಮಯ ಸಾಧಕ : ನಿನ್ನ ಕೈಗಳನ್ನು ನೋಡ್ತಾ ಇದ್ದೀನಿ. ನಿಜ ಹೇಳ್‌ಬೇಕೆಂದ್ರೆ ನಿನ್ನ ಕೈಗಳನ್ನು ಬರಿಗಣ್ಣಲ್ಲಿ ನೋಡೋಕ್ಕಾಗಲ್ಲ.

ಹುಡುಗಿ : ನೋಡಬೇಡ.

ಸಮಯ ಸಾಧಕ : ನಿನ್ನ ಕೈಗೆ ಬಳೆಗಳು ಶೋಭಿಸುತ್ತವೆ. ಅಲ್ಲೊಬ್ಬ ಬಳೆಗಾರ ಕೂತಿದ್ದಾನೆ. ಅವನ ಕಡೆ ಎಂಥೆಂಥ ಬಳೆಗಳಿವೆ. ನೀನು ನೋಡಿದ್ದೀಯಾ ?

ಹುಡುಗಿ : ನಾನಿನ್ನೂ ಜಾತ್ರೇಲಿ ಓಡಾಡ್ಲೆ ಇಲ್ಲ. ಬಂದವಳು ಇಲ್ಲೇ ನಿಂತಿದ್ದೀನಿ.

ಸಮಯ ಸಾಧಕ : ನೀನು ಇಲ್ಲೀವರ್ಗೂ ಬಂದು ಇಲ್ಲೇ ನಿಂತ್ಕೊಂಡಿದ್ದೀಯಾ ?

ಹುಡುಗಿ : ನನ್ನ ತಂದೆ ಗುಡಿಗೆ ಹೋಗಿದ್ದಾರೆ. ಅವರು ಬಂದ ಕೂಡ್ಲೆ ಜಾತ್ರೇಲಿ ಸುತ್ತಾಡ್ತೀವಿ.

ಸಮಯ ಸಾಧಕ : ಅಷ್ಟೊತ್ತಿಗೆ ಜಾತ್ರೆ ಮುಗಿದ್ಹೋಗತ್ತೆ.

ಹುಡುಗಿ : ಅವರು ಅಷ್ಟೊತ್ತು ಅಲ್ಲಿರೋದಿಲ್ಲ. ಈಗ ಬಂದ್ಬಿಡ್ತಾರೆ.

ಸಮಯ ಸಾಧಕ : ಇದು ಶ್ರೀ ವಿಚಿತ್ರದ ಜಾತ್ರೆ. ದೇವರ ದರ್ಶನಕ್ಕೆ ಇಲ್ಲಿ ಸಾಲಿನಲ್ಲಿ ನಿಂತಿರಬೇಕಾಗುತ್ತೆ. ಇಷ್ಟೊತ್ತಿಗೆ ಅವರು ಈ ಗದ್ದಲದಲ್ಲಿ ಸಾಲನ್ನಾದರೂ ಸೇರ್ಕೊಂಡಿದ್ದಾರೊ ಇಲ್ವೊ ?

ಹುಡುಗಿ : ಇರ್ಲಿ ಬಿಡು...ಹೊತ್ತಾದ್ರೆ ಆಗ್ಲಿ.

ಸಮಯ ಸಾಧಕ : ಹೊತ್ತಾಗಿ ಬಿಟ್ರೆ ಜಾತ್ರೆ ಮುಗಿದ್ಹೋದೀತು. ಇದು ಒಂದೇ ದಿನದ ಜಾತ್ರೆ. ಸೂರ್ಯಾಸ್ತದ ಮೊದಲು ಪೂರ್ತಿ ಸುತ್ತಾಡಿ ಹೋಗ

ಬೇಕು. ಅಂಗಡಿಯವರಿಗೆ ಅವಸರ ಜಾಸ್ತಿ. ಕೇಳಿದ ಬೆಲೆಗೆ ವಸ್ತು ಕೊಟ್ಟು ಭಾರ ಇಳಿಸ್ಕೊಂಡು ಬಿಡ್ತಾರೆ. ಗಿರಾಕಿಗಳ ಬೆನ್ನಿಗೆ ಗೂನು ಬರುತ್ತೆ.

ಹುಡುಗಿ : ಆ ಬಳೆಗಾರನ ಹತ್ತಿರ ಬಳೆ ಚೆನ್ನಾಗಿದೆಯೆ ?

ಸಮಯ ಸಾಧಕ : ನನಗಂತೂ ಹಿಡಿಸ್ತು.

ಹುಡುಗಿ : ನೀನು ಕೊಂಡು ಕೊಂಡಿದ್ದೀಯಾ ?

ಸಮಯ ಸಾಧಕ : ನಾನು ಯಾರಿಗಾಗಿ ಕೊಂಡ್ಕೊಳ್ಳಲಿ. ಆದರೆ ನನಗಂತೂ ಹಿಡಿಸ್ತು. ನಿನ್ನ ಕೈಗೆ ಅವು ಚೆನ್ನಾಗಿ ಶೋಭಿಸ್ತವೆ. ಆಗಂತೂ ಆ ಅಂಗಡಿಗೆ ಹೆಣ್ಣು ಮಕ್ಕಳು ಮುತ್ತಿಗೆ ಹಾಕಿದ್ರು. ಹೊಸ ಡಿಸೈನು ಅಂತ ಅಂಗಡಿಗೆ ಮುತ್ತಿಗೆ ಬಿದ್ದಿತ್ತು. ನಿನಗೆ ಬೇಕಿದ್ರೆ ಹಳೆ ಡಿಸೈನೂ ತಗೋಬಹುದು. ಆದರೆ ನೀನು ಆ ಹಳೆ ಡಿಸೈನು ಬಳೆ ಖರೀದಿಸದಿದ್ರೆ ಒಳ್ಳೇದು. ನಿನ್ನ ಬಳೆಯಿಲ್ಲದ ಕೈಗಳೇ ಚೆನ್ನಾಗಿ ಕಾಣ್ತವೆ. ಬರ್ತೀನಿ. (ಹೋಗಲನುವಾಗುತ್ತಾನೆ)

ಹುಡುಗಿ : ಏಯ್...ನಂದೊಂದು ಕೆಲಸ ಮಾಡ್ತೀಯಾ ?

ಸಮಯ ಸಾಧಕ : (ನಿಂತು) ಏನು ?

ಹುಡುಗಿ : ನೀನು ಕೊಂಚ ಇಲ್ಲೇ ಇರ್ತೀಯಾ ?

ಸಮಯ ಸಾಧಕ : ಯಾಕೆ ?

ಹುಡುಗಿ : ನಾನು ಸ್ವಲ್ಪ ಬಳೆಗಾರನ ಅಂಗಡಿಗೆ ಹೋಗಿ ಬಂದ್‌ಬಿಡ್ತೀನಿ.

ಸಮಯ ಸಾಧಕ : ನಾನು ಇಲ್ಲಿ ನಿಂತು ಏನ್ ಮಾಡಲಿ ?

ಹುಡುಗಿ : ನನ್ನ ಅಪ್ಪ ಬಂದ್ರೆ ಹೇಳು...ನಾನು ಬೇಗ ಬಂದ್ ಬಿಡ್ತೀನಿ.

ಸಮಯ ಸಾಧಕ : ನಾನು ಹೇಳ್ತೀನಿ ಕೇಳು. ಅವರು ಇಷ್ಟು ಬೇಗ ಬರೋದು ಸಾಧ್ಯವೇ ಇಲ್ಲ. ಒಂದ್ ಬಾರಿ ಸಾಲಿನಲ್ಲಿ ನಿಂತ್ಕೊಂಡ್ರೆ ಸಾಕು. ಗಂಟೆಗಟ್ಲೆ ಕಾಯಬೇಕು.

ಹುಡುಗಿ : ಗಂಟೆ ಗಟ್ಲೇನೇ ?

ಸಮಯ ಸಾಧಕ : ಮತ್ತೇನು ? ಅವರು ಬರೋದ್ರಲ್ಲಿ ನೀನು ಹತ್ತು ಬಾರಿ ಅಂಗಡಿಗೆ ಹೋಗಿ ಬಂದ್ ಬಿಡ್‌ಬಹುದು. ಬೇಕಿದ್ರೆ ನಿನ್ನ ಮಾತಿಗೆ ಬೆಲೆ ಕೊಟ್ಟು ನಾನು ಇಲ್ಲೇ ನಿಂತಿರ್ತೀನಿ. ನಾನಾದ್ರೂ ಒಬ್ಬನೇ ಇಲ್ಲಿ ನಿಂತು ಏನ್ ಮಾಡಲಿ ? ನಾನಾದ್ರೂ ನಿನ್ನಪ್ಪನ್ನ ಎಲ್ಲಿ ನೋಡಿದ್ದೀನಿ. ನನ್ನ ಮಟ್ಟಿಗೆ ನಿನ್ನಪ್ಪನೂ ಒಂದೇ ಬಳೆಗಾರನೂ ಒಂದೇ. ನಿನ್ಗೆ ಅಗತ್ಯ ಇದ್ರೆ ನಾನೂ ನಿನ್ನ ಜೊತೆಗೆ ಬರ್ತೀನಿ. ಜಾತ್ರೆಯಲ್ಲಿ ಬಾಯಿಗೆ ಬಂದ ಬೆಲೆ ಹೇಳ್ತಾರೆ. ತುಂಬ ಹುಷಾರಾಗಿರ್‌ಬೇಕು. ಇಲ್ಲಿ ಮೋಸ ಜಾಸ್ತಿ.

ಎಲ್ಲರದೂ ಸಮಯ ಸಾಧಕತನ. ನಿನ್ನಂಥ ಹುಡುಗೀನ ನೋಡಿ ಜಾಸ್ತಿ ಮೋಸ ಮಾಡ್ತಾರೆ. ನೀನು ಒಪ್ಪಿದ್ರೆ ನಾನು ನಿನ್ನ ಜತೆ ಬರ್ತೀನಿ. ಅವನ ಜೊತೆ ಚೌಕಾಸಿ ಮಾಡೋದ್ಕಲ್ಲ. ಅದು ನನಗೆ ಜಮಾಯಿ ಸೋದೇ ಇಲ್ಲ. ನಿನ್ನ ಜೊತೆ ಒಬ್ಬ ಗಂಡಸು ಇದ್ದಾನೆ ಅಂದ್ರೆ ಸಾಕು. ಅವನ ಬೆಲೆಗೆ ಕಡಿವಾಣ ಬೀಳುತ್ತೆ... ನಾನೂ ಬರ್ಲೆ ?

ಹುಡುಗಿ : ಬಂದ್ರೆ ಚೆನ್ನಾಗಿರುತ್ತೆ. ಬಾ...

(ಹೊರಡಲನುವಾಗುತ್ತಾಳೆ. ಸಮಯ ಸಾಧಕ ಅವಳ ಕೈ ಹಿಡಿದು ಕೊಳ್ಳುತ್ತಾನೆ)

ಸಮಯ ಸಾಧಕ : ಆ ಕಡೆ ಅಲ್ಲ. ಈ ಅಡ್ಡ ದಾರೀಲಿ ಹೋಗ್‌ಬೇಕು.

(ಅವಳ ಕೈ ಹಿಡಿದು ಜನದಟ್ಟಣೆಯಲ್ಲಿ ಮಾಯವಾಗಿ ಬಿಡುತ್ತಾನೆ)

(ಜಾತ್ರೆಯಲ್ಲಿ ಒಂದು ಹೆಂಗಸು ಮತ್ತು ಅವಳ ಗಂಡ. ಹೆಂಗಸು ಚುರುಕು, ಗಂಡ ಸೋಮಾರಿ)

ಹೆಂಗಸು : ನಿಮಗೆ ಸುಸ್ತಾಯಿತೆ ?

ಗಂಡಸು : ನಿನಗೂ ಗೊತ್ತಾಯ್ತೆ ?

ಹೆಂಡತಿ : ಆಗಿಂದ್ಲೂ ನೋಡ್ತಾ ಇದ್ದೀನಿ. ನಿಮ್ಮ ಕಾಲುಗಳು ಮುಂದೆ ಹೋಗೋದೇ ಇಲ್ಲ.

ಗಂಡಸು : ಆ ದೋಣಿಯಿಂದ ಇಳಿದು ಭೂಮಿಗೆಕಾಲು ಹಚ್ಚಿದ್ದೇ ತಡ ಕಾಲು ಭಾರವಾಗಿ ಬಿಟ್ಟಿವೆ. ನಿನ್ನ ಕಾಲು ಭೂಮಿಗೆ ತಾಗಿದ್ದೇ ತಡ ಹಕ್ಕಿಗೆ ರೆಕ್ಕೆ ಬಂದಂತಾಗಿದೆ.

ಹೆಂಡತಿ : ನನಗೆ ಜಾತ್ರೆಯ ಸೆಳೆತ ಇಲ್ದೇ ಇರೋಕ್ಕೆ ಏನಾಗಿದೆ ? ವರ್ಷ ಕ್ಕೊಂದು ಬಾರಿ ಜಾತ್ರೆ ಬರುತ್ತೆ. ಉತ್ಸಾಹ ಇರದೇ ಏನು ?

ಗಂಡ : ಭೇಟಿಗೆ ಹೋಗೋದಿಲ್ವೆ ?

ಹೆಂಡತಿ : ಯಾರ ಭೇಟಿಗೆ ?

ಗಂಡ : ದೇವರ ದರ್ಶನಕ್ಕೆ, ಒಂದು ವರ್ಷದ ನಂತರ ಬಂದಿದ್ದೀಯೆ ?

ಹೆಂಡತಿ : ಅಂದ್ರೆ ? ನೀವು ಬರೋದಿಲ್ವೆ ? ನಾನೊಬ್ಬೇ ಹೋಗೋದೆ ?

ಗಂಡ : ನಿನ್ನ ಮುಖ ನೋಡಿದ್ರೆ ನಿನ್ನಿಷ್ಟ ಹಾಗೇ ಇದೆಂತ ಅರ್ಥವಾಗುತ್ತೆ.

ಹೆಂಡತಿ : ಹೀಗೇಕೆ ಮಾತಾಡ್ತೀರಿ ನೀವು ?

ಗಂಡ : ನನಗೆ ಸುಸ್ತಾಗಿದೆ - ಅಂತ ನಿನಗೂ ಗೊತ್ತು. ನಾನು ಇಲ್ಲಿ ಸ್ವಲ್ಪ ವಿಶ್ರಾಂತಿ ಮಾಡಿ ಅಲ್ಲಿ ಇಲ್ಲಿ ಸ್ವಲ್ಪ ಓಡಾಡ್ತೀನಿ. ಏನಾದರೊಂದಿಷ್ಟು ಖರೀದಿ ಮಾಡ್ತೀನಿ. ಕೊನೆಗೆ ಇಬ್ರೂ ಇಲ್ಲೇ ಭೇಟಿಯಾಗೋಣ.

ಹೆಂಡತಿ : ಎಲ್ಲಾದರೂ ದಾರಿ ತಪ್ಪಿದ್ರೆ ?

ಗಂಡ : ತುಂಬ ಉತ್ಸಾಹದಿಂದ ಕೇಳ್ತಾ ಇದೀಯಲ್ಲ.

ಹೆಂಡತಿ : ಹೇಳಿದ್ನಲ್ಲ. ಉತ್ಸಾಹ ಜಾತ್ರೇದು.

ಗಂಡ : ಮತ್ತೆ ದರ್ಶನದ್ದು.

ಹೆಂಡತಿ : ಅದೂ ಅದರಲ್ಲೇ ಬಂತಲ್ಲ.

ಗಂಡ : ಕೇವಲ ಇದೆರಡೇ ಅಲ್ಲ. ನಿನ್ನ ಉತ್ಸಾಹದ ಅನೇಕ ರೆಕ್ಕೆಗಳು ಬಿಚ್ಚಿಕೊಂಡಿವೆ.

ಹೆಂಡತಿ : ಹೊರಡಲೆ ?

ಗಂಡ : ನಿನ್ನನ್ನು ಅಡ್ಡೈಸಲು ಬರುತ್ತದೆಯೆ ? ನಾನು ಇಲ್ಲೇ ಇರ್ತೀನಿ ಇದೇ ಪರಿಸರದಲ್ಲಿ. ನನ್ನ ಕಾಣಬೇಕಂದ್ರೆ ಈ ಕಡೆಗೆ ಬಾ. ವೇಳೆಯಾದ್ರೂ ನಡೆದೀತು. ವರ್ಷಕ್ಕೊಮ್ಮೆ ಬರೋ ಜಾತ್ರೆ. ನಿನ್ನ ಉತ್ಸಾಹ ಮುಗಿಸ್ಕೊಂಡು ಬಾ.

(ಹೆಂಡತಿ ಗುಡಿಗೆ ಹೋಗಲು ಜನದಟ್ಟಣೆಯಲ್ಲಿ ಸೇರಿಕೊಳ್ಳುತ್ತಾಳೆ. ಗಂಡ ಕಳ್ಳ ಹೆಜ್ಜೆಯಲ್ಲಿ ಅವಳನ್ನು ಹಿಂಬಾಲಿಸುತ್ತಾನೆ)

(ಒಂದು ಸ್ಥಳದಲ್ಲಿ ನಿಂತು ಸಮಯ ಸಾಧಕ ಆ ಹುಡುಗಿಯ ಕೈಗೆ ಬಳೆ ಏರಿಸುತ್ತಿದ್ದಾನೆ)

ಸಮಯ ಸಾಧಕ : ನಾನು ಹೇಳಿರಲಿಲ್ವೆ ? ನಿನಗೆ ಹಿಡಿಸಿತಲ್ಲ.

ಹುಡುಗಿ : ಹೌದು. ಆದರೆ ?

ಸಮಯ ಸಾಧಕ : ನಾನಿಲ್ಲದಿದ್ರೆ ಆ ಅಂಗಡಿಕಾರ ನಿನ್ಗೆ ಮೋಸ ಮಾಡ್ತಿದ್ದ. ಅವನ ಮಾತಿನಿಂದ ಹಾಗನ್ನಿಸುತ್ತಿರಲಿಲ್ವೆ ?

ಹುಡುಗಿ : ಅನ್ನಿಸುತ್ತಿತ್ತು. ಆದರೆ...

ಸಮಯ ಸಾಧಕ : ಅಲ್ಲೇ ಕೈಗೇರಿಸಿಕೊಂಡಿದ್ರೆ ಗದ್ದಲದಲ್ಲಿ ಅವನೇ ಏರಿಸುತ್ತಿದ್ದ. ಆದರೆ ಅವನು ಗಡಿಬಿಡಿಯಲ್ಲಿ ಒಡೆದ ಬಳೆಗಳಿಗೆಲ್ಲ ನಾವು ದುಡ್ಡು ಕೊಡ ಬೇಕಾಗುತ್ತಿತ್ತು. ಅವನ ಕೈ ನೋಡಲಿಲ್ವಾ ? ಅಪರಾಧಿಯಂತೆ ಅವನ ಕೈ ನಡುಗ್ತಾ ಇತ್ತು.

ಹುಡುಗಿ : ನೋಡಿದೆ.

ಸಮಯ ಸಾಧಕ : ಬೇಕಾದ್ರೆ ನನ್ನ ನೋಡು. ನನಗೆ ಅಭ್ಯಾಸವಿಲ್ಲದಿದ್ರೂ ದೊಡ್ಡ ಅನುಭವಿಯಂತೆ ನಿನ್ನ ಕೈಗೆ ಬಳೆ ಏರಿಸ್ತಾ ಇದ್ದೀನಿ. ನಿನ್ಗೆ ನೋಯ್ತಾ ಇದೆಯಾ ?

ಹುಡುಗಿ : ಇಲ್ಲ.

ಸಮಯ ಸಾಧಕ : ನೋಯುವಂಥದ್ದೇನಿದೆ ಅದರಲ್ಲಿ ? ನನಗೆ ಸ್ವಲ್ಪ ಹೆಚ್ಚು ಹೊತ್ತು ಬೇಕಲ್ವ ?

ಹುಡುಗಿ : ಇಲ್ಲ. (ಗಲಿಬಿಲಿಗೊಳ್ಳುತ್ತಾಳೆ.)

ಸಮಯ ಸಾಧಕ : ಬಳೆ ಗಾಜಿನದಲ್ಲ. ತುಂಬ ಹುಷಾರಿಯಿಂದ ಏರಿಸ್‌ಬೇಕು. ಒಡೆದರೆ ಹೋಯ್ತು. ನೀನೇಕಿಷ್ಟು ಗಾಬರಿಯಾಗಿದ್ದೀ ?

ಹುಡುಗಿ : ನೀನೇ ಬಳೆಯ ದುಡ್ಡು ಕೊಟ್ಟು ಬಿಟ್ಟೆಯಲ್ಲ.

ಸಮಯ ಸಾಧಕ : ಕೊಟ್ಟರೇನಾಯ್ತು. ನಿನ್ನ ಹತ್ರ ದುಡ್ಡಿರಲಿಲ್ಲ. ಜಾತ್ರೆಯಲ್ಲಿ ಅಂಗಡಿಯವರು ಉದ್ರಿ ಕೊಡ್ತಾರೆಯೆ ? ನಿನ್ನ ತಂದೆ ಬರೋವರ್ಗೂ ನೀನು ನಿಂತುಕೊಂಡ್ರೆ. ಈ ಬಳೆಗಳು ಸಿಕ್ತಾ ಇರಲಿಲ್ಲ. ಮುಗಿದು ಹೋಗ್ತಿದ್ದವು.

(ಬಳೆಗಳು ಕೈಗೇರಿಸಿ ಮುಗಿದರೂ ಸಮಯ ಸಾಧಕನ ಕೈಯಲ್ಲಿ ಅವಳ ಕೈ ಇದೆ)

ಹುಡುಗಿ : ಅದೂ ನಿಜಾನೇ. ಅಪ್ಪ ಬಂದಕೂಡ್ಲೆ ನಿನ್ನ ದುಡ್ಡು ಕೊಟ್ಟು ಬಿಡ್ತೀನಿ. ಎಲ್ಲೂ ಹೋಗ್‌ಬೇಡ.

ಸಮಯ ಸಾಧಕ : ಎಲ್ಲಾದರೂ ಉಂಟೆ. ನಿನ್ನ ಬಿಟ್ಟು ಎಲ್ಲೂ ಹೋಗೊಲ್ಲ. (ಹುಡುಗಿ ತನ್ನ ಕೈ ಅವನ ಕೈಯಿಂದ ತೆಗೆದುಕೊಳ್ಳುತ್ತಾಳೆ.) ನಿಜಾ ಹೇಳ್‌ಬೇಕೆಂದ್ರೆ ಬಳೆಗಳಿಲ್ಲದಿದ್ರೂ ನಿನ್ನ ಕೈ ಮುದ್ದಾಗಿ ಕಾಣುತ್ತವೆ.

ಹುಡುಗಿ : ಹಣ ಎಷ್ಟಾಯ್ತು ?

ಸಮಯ ಸಾಧಕ : ಹಣದ್ದೇನು ಬಿಡು. ನೀನು ದುಡ್ಡು ಕೊಡದಿದ್ರೂ ನಡೆಯತ್ತೆ.

ಹುಡುಗಿ : ಅದು ಹೇಗೆ ? ಹಣ ಕೊಡದಿದ್ರೆ ಬಳೆ ನನ್ನದು ಹೇಗಾಗುತ್ತೆ ? ಸುಮ್ನೆ ಇನ್ನೊಬ್ಬರಿಂದ ಬಳೆ ತಗೊಳ್ಳೋದು ಹೇಗೆ ?

ಸಮಯ ಸಾಧಕ : ಸುಮ್ನೆ ಹೇಗೆ ? ಮತ್ತೆ ನಾನು ದುಡ್ಡು ಬಿಡ್ತೀನೆಯೆ ?

ಹುಡುಗಿ : ಅಪ್ಪ ಬಯ್ಯದಿದ್ರೆ ಸಾಕು.

ಸಮಯ ಸಾಧಕ : ಏಕೆ ? ಬಳೆ ಖರೀದಿಸಿದ್ದಕ್ಕೇ ?

ಹುಡುಗಿ : ಅದಕ್ಕಲ್ಲ. ನಿನ್ನ ದುಡ್ನಲ್ಲಿ ಬಳೆ ಖರೀದಿಸಿದ್ದಕ್ಕೆ.

ಸಮಯ ಸಾಧಕ : ನಾನು ನಿನ್ನ ತಂದೆಗೆ ತಿಳಿಸಿ ಹೇಳ್ತೀನಿ.

ಹುಡುಗಿ : ಬೇಡ. ನಾನು ಹೋಗ್ತೀನಿ.

ಸಮಯ ಸಾಧಕ : ನಾನು ?

ಹುಡುಗಿ : ಆಂ...ಮರೆತೇ ಬಿಟ್ಟೆ-ಬಾ ಹೋಗೋಣ.

ಸಮಯ ಸಾಧಕ : ಈ ಹೊತ್ತಿಗೂ ನಿನ್ನ ತಂದೆಗೆ ಸಾಲು ಸಿಕ್ಕಿದೆಯೋ ಇಲ್ವೊ ದೇವರಿಗೇ ಗೊತ್ತು. ಅಂದ್ಹಾಗೆ ನೀನು ಬೀಡಾ ತಿಂತಿಯಾ ?

ಹುಡುಗಿ : ಇಲ್ಲ.

ಸಮಯ ಸಾಧಕ : ಬೀಡ ಅಂದ್ರೆ ಏನಂತಾದ್ರೂ ಕೇಳು.

ಹುಡುಗಿ : ನನ್ಗೆ ಯಾವ ಎಲೆನೂ ಹಿಡಿಸೋದಿಲ್ಲ.

ಸಮಯ ಸಾಧಕ : ನನಗೆ ಗೊತ್ತು. ನಿನ್ನ ಹತ್ರ ದುಡ್ಡಿಲ್ಲ ಅಂತ ಹಿಂದೆ ಮುಂದೆ ನೋಡ್ತಾ ಇದ್ದೀಯ. ಪಾನ್‌ಗೇನು ಒಂದು ಲಕ್ಷ ಬೀಳೋದಿಲ್ಲ. ನಿನ್ಗೆ ಹಿಡಿಸದಿದ್ರೆ ನನ್ನ ಪಾನಿನ ದುಡ್ಡು ನೀನೇ ಕೊಡು.

ಹುಡುಗಿ : ಕೊಡ್ತೀನಿ-ಅದ್ಕೇನಂತೆ.

ಸಮಯ ಸಾಧಕ : ಹಾಗಿದ್ರೆ ಪಾನ್ ಹಾಕೋಣ.

ಹುಡುಗಿ : ಯಾವ ಪಾನ್ ?

ಸಮಯ ಸಾಧಕ : ಸಾದಾ ಅಲ್ಲ. ಬಣ್ಣದ್ದು.

ಹುಡುಗಿ : ಬಣ್ಣದ್ದೇ ?

ಸಮಯ ಸಾಧಕ : ಅದನ್ನು ಈ ಗದ್ದಲದಲ್ಲಿ ತಿನ್ನೋದಲ್ಲ.

ಹುಡುಗಿ : ಮತ್ತೆ ?

ಸಮಯ ಸಾಧಕ : ಅಲ್ಲಿ, ದೂರದಲ್ಲಿ, ಗಿಡಗಂಟೆಗಳ ಮರೆಯಲ್ಲಿ ತಿನ್ನೋದು.

ಹುಡುಗಿ : ಗಿಡಗಂಟೆಗಳಲ್ಲೇ ?

ಸಮಯ ಸಾಧಕ : ಅಲ್ಲಿ ಎಲೆಗೆ ಬಣ್ಣ ಬರತ್ತೆ.

(ಅವನು ಹುಡುಗಿಯ ಕೈ ಹಿಡಿದು ಜನಸಂದಣಿಯಲ್ಲಿ ಸೇರಿಕೊಳ್ಳುತ್ತಾನೆ)

(ಜಾತ್ರೆಯ ಇನ್ನೊಂದು ಕಡೆ ಆತನ ಹೆಂಡತಿ ಯಾರೋ ಒಬ್ಬ ಗಹಗಹಿಸಿ ನಗುತ್ತಿದ್ದಾರೆ)

ಹೆಂಡತಿ : ನಿಮ್ಮ ಸ್ವಭಾವ ನನಗೆ ತುಂಬ ಹಿಡಿಸ್ತು. ನಾನು ಯಾರಿಗೋ ಹುಡುಕ್ತಾ ಇದ್ದೆ, ನೀವು ಅದೇ ಹೊತ್ತಿಗೆ ಬಂದು ಬಿಟ್ರಿ. ಅರಸುವ ಬಳ್ಳಿ ಕಾಲಿಗಡರಿದಂತಾಯ್ತು.

ಯಾರೋ ಒಬ್ಬ : ನಿಮ್ಮ ಕಣ್ಣಿನಿಂದ್ಲೆ ಗೊತ್ತಾಯ್ತು. ನೀವು ಯಾರನ್ನೋ ಹುಡುಕ್ತಾ ಇದ್ದೀರಿ ಅಂತ.

ಹೆಂಡತಿ : ಮತ್ತೆ ನಾನೂ ಹಿಂದೆ ಮುಂದೆ ನೋಡದೆ ಹೇಳಿಬಿಟ್ಟೆ-ನಿಮಗೆ.

ಯಾರೋ ಒಬ್ಬ : ನನಗೆ ತುಂಬಾನೆ ಖುಷಿಯಾಯ್ತು.

ಹೆಂಡತಿ : ನನಗೂ ಅಷ್ಟೆ. ನನಗೆ ನನ್ನ ತವರು ಮನೆಯವರು ಸಿಕ್ಕಷ್ಟು ಸಂತೋಷವಾಯ್ತು. ತಂದೆ-ತಾಯಿ, ಅಣ್ಣ-ತಮ್ಮ, ದನಕರು-ಹಿತ್ತಿಲು-ತೋಟ.

ಯಾರೋ ಒಬ್ಬ : ನಿನಗೆ ಶಕು ಗೊತ್ತೆ ?

ಹೆಂಡತಿ : ಶಕು ಯಾರು ?

ಯಾರೋ ಒಬ್ಬ : ಕಣ್ವನ ಶಕು.

ಹೆಂಡತಿ : ಯಾವ ಕಣ್ವ ?

ಯಾರೋ ಒಬ್ಬ : ಕಣ್ವ ಮಹರ್ಷಿ, ಅವನ ಶಕುಂತಲೆ.

ಹೆಂಡತಿ : ಓ...ಶಕುಂತಲಾ ! ಅವಳಿಗೇನಾಯ್ತು ?

ಯಾರೋ ಒಬ್ಬ : ನೀನೆ ಅವಳಾದೆ.

ಹೆಂಡತಿ : ಅಂದರೆ ?

ಯಾರೋ ಒಬ್ಬ : ಕಣ್ವ ಋಷಿಯ ಆಶ್ರಮದಲ್ಲಿ ತೋಟದಲ್ಲಿ ತೆಂಗಿನ ಸಸಿ ಬೆಳೆದಂತೆ ಶಕುಂತಲೆ ಬೆಳೆದಳು. ಒಂದು ದಿನ ಆ ತೆಂಗಿನ ಸಸಿಯನ್ನೇ ಕಿತ್ತೊಗೆಯುವ ಪ್ರಸಂಗ ಬಂತು.

ಹಂಡತಿ : ಅಂದರೆ ?

ಯಾರೋ ಒಬ್ಬ : ಅಂದ್ರೆ ಮುದ್ದಿನ ಶಕುಂತಲೆಯನ್ನು ದೊರೆ ದುಶ್ಯಂತನಲ್ಲಿ ಕಳಿಸ ಬೇಕಾಯ್ತು. ಸಂಬಂಧ ಮುರಿಯೋದು ಸುಲಭ - ಪ್ರೀತಿಯಲ್ಲ ಅನ್ನುವಂಥ ಪರಿಸ್ಥಿತಿ ಕಣ್ವನಿಗೆ ಬಂತು. ಕಣ್ವನ ಸ್ಥಿತಿ ಯಾರಿಗೂ ಬೇಡವಾಯ್ತು. ಆಶ್ರಮದ ಜನರೆಲ್ಲ ಶಕುಂತಲೆಯ ಸುತ್ತಮುತ್ತಿ ಕೊಂಡರು. ಇಬ್ಬನಿಯ ಹನಿಗಳು ಎಲೆಗಳಿಂದ ಧರತಿಯ ಮೇಲೆ ಕಣ್ಣೀರಿನಂತೆ ಉದುರಿ ಬಿದ್ದವು. ಹೂವುಗಳು ತಮ್ಮ ದೇಟಿನಿಂದ ಸಂಬಂಧ ಕಳಚಿಕೊಂಡು ಆಶ್ರಮದಲ್ಲಿ ರಾಶಿರಾಶಿಯಾಗಿ ಬಿದ್ದಿದ್ದವು. ಕಿವಿ ನಿಮಿರಿಸಿಕೊಂಡು ನಿಂತ ದನಕರುಗಳ ಕಣ್ಣೀರು ಝುರಿಯಾಗಿ ಹರಿದು ಬಂತು. ಮೊನ್ನೆ ಮೊನ್ನೆ ಹುಟ್ಟಿದ, ಹಾಲು ಹೀರಲೂ ಅರಿಯದ ಚಿಗರೆಯ ಮರಿ ಶಕುಂತಲೆಯ ಸೆರಗು ಹಿಡಿದು ಎಳೆಯುತ್ತ 'ನೀನು ನಮ್ಮನ್ನು ಬಿಟ್ಟು ಹೋಗಬೇಡ' ಎಂದು ಮೊರೆಯಿಟ್ಟಿತು. ಆಶ್ರಮದ ಸ್ಥಿತಿ ಈ ರೀತಿಯಾದರೆ ಆ ಶಕುಂತಲೆಯ ಮನಸ್ಥಿತಿ ಹೇಗಿರಬೇಡ ?

ಹೆಂಡತಿ : (ಆವೇಗದಿಂದ) ಬೇಡಿ, ಬೇಡಿ. ನನಗೆ ಆ ಕಥೆ ಹೇಳಬೇಡಿ. ನನಗೆ ಆ ಕಥೆ ಗೊತ್ತು.

ಯಾರೋ ಒಬ್ಬ : ನಿನಗೆ ಈ ಕಥೆ ಗೊತ್ತುಂಟೆ ?

ಹೆಂಡತಿ : ಹೌದು. ಶಕುಂತಲಾ ಗಿಕುಂತಲಾ ಬೇರೆ ಯಾರೂ ಅಲ್ಲ. ಇದೂ ನನ್ನದೇ ಕಥೆ. ನಿಮ್ಗೆ ಯಾರು ಹೇಳಿದ್ರು ಹೇಳಿ.

ಯಾರೋ ಒಬ್ಬ : ಇದು ಶಕುಂತಲೆಯ ಕಥೆ ಹೌದು. ಅದು ನಿನ್ನ ಕಥೆ ಆಗಿರಲೂ ಬಹುದು.

ಹೆಂಡತಿ : ಅಲ್ಲ...ಅಲ್ಲ...ಇದು ನನ್ನದೇ ಕಥೆ. ನನಗಿರೊ ಸಂದೇಹ ನಿಜ ವಾಯ್ತು. ನೀನು ನನ್ನ ತೌರುಮನೆಯವನು ಅದಕ್ಕೇ ನಿನಗಿದೆಲ್ಲ ಗೊತ್ತುಂಟು.

ಯಾರೋ ಒಬ್ಬ : ನಿಜವಾಗಿಯೂ ನನಗೊಂದೂ ಗೊತ್ತಿಲ್ಲ. ನನಗೆ ಕೇವಲ ಶಕುಂತಲೆಯ ಕಥೆ ಗೊತ್ತು. ಈ ಕಥೆಯಲ್ಲಿ ಮುಂದೇನಾಗುತ್ತೆ ನಿನಗೆ ಗೊತ್ತುಂಟೆ ? ಶಕುಂತಲೆ ಆಶ್ರಮ ಬಿಡಬೇಕಾಗುತ್ತೆ ಅನ್ನೋದು ದುಃಖದ ವಿಷಯವಲ್ಲ. ಅವಳನ್ನು ಅವಳ ಗಂಡ ದುಶ್ಯಂತ ಸ್ವೀಕಾರ ಮಾಡೋದಿಲ್ಲ ಅನ್ನೋದು ದೊಡ್ಡ ದುರಂತ.

ಹೆಂಡತಿ : ನನ್ನ ಕಥೆಯನ್ನೇ ನನಗೆ ಹೇಳಿ ಗಾಯದ ಮೇಲೆ ಬರೆ ಎಳೆದಿರಿ ನೀವು. ನಿಮಗೆ ಯಾವ ಸಂತೋಷ ಸಿಕ್ತು ಇದರಲ್ಲಿ ?

ಯಾರೋ ಒಬ್ಬ : ಮತ್ತೊಂದ್ ಬಾರಿ ಜೀವಂತ ಶಕುಂತಲೆಯನ್ನು ನೋಡೋ ಸಂತೋಷ.

ಹೆಂಡತಿ : ನೋಡೋ ಸಂತೋಷವಲ್ಲ, ಕಣ್ಣೀರಿಳಿಸುವ ಸಂತೋಷ.

ಯಾರೋ ಒಬ್ಬ : ಶಕುಂತಲೆಯ ಮುಂದಿನ ಕಥೆ ಹೇಳಲೆ ? ಮುಂದೆ ಅವಳ ದುಃಖದ ಹೂವುಗಳಾಗುತ್ತವೆ.

ಹೆಂಡತಿ : ಹೂವು ಗೀವು ಏನೂ ಆಗೋದಿಲ್ಲ. ಆ ಕಥೆ ಅಲ್ಲಿಗೇ ಮುಗಿಯುತ್ತೆ.

ಯಾರೋ ಒಬ್ಬ : ಎಲ್ಲಿಗೆ ?

ಹೆಂಡತಿ : ಅವಳು ತವರು ಮನೆ ಬಿಟ್‌ಬರ್‍ತಾಳೆ. ಆದರೂ ಅವನು ಅವಳನ್ನು ಸ್ವೀಕಾರ ಮಾಡೋದಿಲ್ಲ.

ಯಾರೋ ಒಬ್ಬ : ಸ್ವೀಕಾರ ಮಾಡೋದಿಲ್ಲ, ಅಂದ್ರೆ ?

ಹೆಂಡತಿ : ನಾನು ನನ್ನ ಕಥೆ ಹೇಳ್ತಾ ಇದ್ದೀನಿ. ನನ್ನ ಕಥೆ ನಿನಗೆ ಚೆನ್ನಾಗಿ ಗೊತ್ತುಂಟೆ ?

ಯಾರೋ ಒಬ್ಬ : ಹೇಳು.

ಹೆಂಡತಿ : ಅವ್ನಿಗೆ ಹೆಂಡತಿ ಅಂದ್ರೆ...ಹಾರಾಡುವ ಹಕ್ಕಿಯನ್ನು ತಂದು ಪಂಜರದಲ್ಲಿಟ್ಟಂತೆ. ಅವ್ನು ನನ್ನನ್ನು ಹೆಂಡ್ತಿಯನ್ನಾಗಿ ನೋಡ್ತಾನೆ ವಿನಃ ಮನುಷ್ಯಳನ್ನಾಗಿ ನೋಡೋದಿಲ್ಲ. ಮದವೆಯಾದಂದಿನಿಂದ ನನ್ನ ತೌರುಮನೆ ದಾರಿ ಬಂದ್. ವರ್ಷಕ್ಕೊಮ್ಮೆ ಈ ಜಾತ್ರೆ ಮಾತ್ರ! ವರ್ಷಕ್ಕೊಮ್ಮೆ ಈ ಜಾತ್ರೆ ನೋಡೋದು, ಅದೇ ನೆನಪಿನಲ್ಲಿ ವರ್ಷವಿಡೀ ಬದುಕೋದು. ನನ್ನ ಗಂಡ ಸಂಶಯ ಪ್ರಕೃತಿಯವ. ಅವನ ಹೃದಯ ಸಂಶಯದ ಹುಳುಗಳಿಂದ ತೂತಾಗಿದೆ. ಅದಕ್ಕೆ ಅವನ ಹೃದಯದಲ್ಲಿ ನನ್ನ ಮೇಲಿನ ನಂಬಿಕೆ ಪಾದರಸದಂತೆ ಜಾರಿ ಹೋಗುತ್ತದೆ. ಬಹಳ ದಿನಗಳನಂತರ ಒಂದು ವರ್ಷದನಂತರ ನೀವು ಭೇಟಿಯಾಗಿದ್ದೀರಿ. ತುಂಬ ಖುಷಿ ಆಯ್ತು. ಮೊದಲು ನನಗೆ ನಿಮ್ಮ ಪರಿಚಯವಾಗಲಿಲ್ಲ. ಈಗ ಗೊತ್ತಾಯ್ತು. ನಿಮ್ಮ ಸ್ವಭಾವ

ಎಷ್ಟು ಒಳ್ಳೆಯದು ಅಂತ. ಇಂಥವರು ನನ್ನ ತೌರುಮನೆ ಬಿಟ್ಟು ಬೇರೆಲ್ಲಿರೋಕೆ ಸಾಧ್ಯ ?
ಆ ಪ್ರೇಮಾಳ ಮದ್ವೆಯಾಯ್ತೆ ? ಆಗದಿದ್ರೆ ಹೇಳಿಬಿಡಿ...ಮದ್ವೆ ಆಗ್‌ಬೇಡಾಂತ. ನಮ್ಮ ಹಿತ್ತಲಲ್ಲಿದ್ದ ಸಂಪಿಗೆಯ ಮರಕ್ಕೆ ಹೂವು ಬಂತೆ ? ಮನೆಯ ಮುಂದಿನ ಕೆರೆಯಲ್ಲಿ ಈಗಲೂ ಕೆಂಪು ಕಮಲಗಳು ಅರಳುತ್ತವೆಯೆ ? ಈ ಬಾರಿ ಬೆಕ್ಕು ಅಟ್ಟದ ಮೇಲೆ ಎಷ್ಟು ಮರಿಗಳನ್ನು ಹಾಕಿದೆ ? ಕಪಿಲ ಹಸು ಕರು ಹಾಕಿದೆಯೆ ? (ಅವನನ್ನು ಹಿಡಿದು ಅಲ್ಲಾಡಿಸುತ್ತ) ನೀವೇಕೆ ಮಾತಾಡೋಲ್ಲ. ಹೇಳಿ ಏನಾಗಿದೆ ತೌರುಮನೇಲಿ ? ನನ್ನನ್ನು ಹೊರಗೆ ಆಚೆಗೆ ಹೋಗಲು ಬಿಡೋದಿಲ್ಲ. ನಮ್ಮ ಮನೆಗೆ ಯಾರೂ ಬರೋದಿಲ್ಲ. ನನಗೆ ಯಾವ ಮಹಾರೋಗವಾಗಿದೇಂತ ಈ ಜನ ನನ್ನಿಂದ ದೂರ ಆಗಿದಾರೆ ? ಹೇಳು...ಹೇಳು (ಎಂದು ಅವನನ್ನು ಜೋರಾಗಿ ಅಲ್ಲಾಡಿಸುತ್ತಾಳೆ. ಇದನ್ನೆಲ್ಲ ದೂರದಿಂದ ನೋಡುತ್ತಿದ್ದ ಅವಳ ಗಂಡ ಮುಂದೆ ಬರುತ್ತಾನೆ.)

ಗಂಡ : ಆಯಿತೇ ದರ್ಶನ ? ಚೆನ್ನಾಗಿ ಮಾಡ್ಕೋ ದರ್ಶನ.
(ಅವಳು ಯಾರೊಬ್ಬನಿಂದ ದೂರ ಸರಿಯುತ್ತಾಳೆ.)

ಹೆಂಡತಿ : ಇವರು...(ಯಾರೊ ಒಬ್ಬನನ್ನು ತೋರಿಸಿ) ನಮ್ಮ ತವರು ಮನೆಯವ್ರು.

ಗಂಡ : ನಿಮ್ಮಿಬ್ಬರ ಸಂಪರ್ಕದಿಂದ ಗೊತ್ತಾಯ್ತು.

ಹೆಂಡತಿ : ನನ್ಗೆ ತೌರುಮನೇದೇ ಚಿಂತೆಯಾಗಿದೆ. ಇವರು ಏನೂ ಹೇಳ್ತಾ ಇಲ್ಲ.

ಗಂಡ : ಎಲ್ರೂ ಮಾತು ಆಡ್ತಾರೆ. ಕೆಲವರು ಕೆಲಸ ಮಾಡ್ತಾರೆ. (ಯಾರೋ ಒಬ್ಬನಿಗೆ) ಈಗ ಇವಳ್ನ ಕರ್ಕೊಂಡು ಹೋಗ್ತಿಯಲ್ಲ ?

ಹೆಂಡತಿ : ಎಲ್ಲಿಗೆ ?

ಗಂಡ : ನಿನ್ನ ತವರು ಮನೆಗೆ.

ಹೆಂಡತಿ : ನಿಜವಾಗಿಯೂ !

ಗಂಡ : ನೋಡಿ, ತವರುಮನೆ ನೆನಪು ಮಾಡಿದ್ರೆ ಸಾಕು, ಕುಣೀತಾಳೆ. ತವರು ಮನೆ ಬೇಕೇ ನಿನ್ಗೆ ? ತವರು ಮನೆಯವನೊಬ್ಬ ಭೇಟಿಯಾದ್ರೆ ಸಾಕಾಗೋದಿಲ್ವೆ ? ಇದಕ್ಕೇ ಬೇಕೇನು ನಿನ್ಗೆ ಶ್ರೀ ವಿಚಿತ್ರದ ಜಾತ್ರೆ. ಇವನ ದರ್ಶನ. ಮದ್ವೆ ದಿನಾನೇ ನನ್ಗೆ ಸಂಶಯ ಇತ್ತು. ಅವತ್ತೆ ನಿನ್ನ ತಲೆ ಸರಿ ಇರ್ಲಿಲ್ಲ. ನಿನ್ನ ಕಣ್ಣುಗಳು ಯಾರನ್ನೋ ಹುಡುಕ್ತಾ ಇದ್ದವು. ಯಾರನ್ನು ಹುಡುಕ್ತಾ ಇದ್ದೀ ಅಂತ ಈವತ್ತು

ಗೊತ್ತಾಯ್ತು. ತವರು ಮನೆಗೆ ಹೋಗೋದನ್ನೇ ನಿಲ್ಲಿಸಿದ್ರೂ ಪ್ರತಿವರ್ಷ ಇವ್ನ ದರ್ಶನಕ್ಕೆ ಜಾತ್ರೆಗೆ ಬರ್ತೀಯಲ್ಲ ? ಇವನ ಹೆಸರೇನು ?

ಹೆಂಡತಿ : ನನಗೆ ಅವ್ನ ಸರಿಯಾದ ಪರಿಚಯ ಇಲ್ಲ.

ಗಂಡ : ಸರಿಯಾಗಿ ಅಲ್ಲದಿದ್ರೆ ಹ್ಯಾಗೆ ಪರಿಚಯ ಅಂತ ಹೇಳು.

ಹೆಂಡತಿ : ನಿಜವಾಗಿ ಹೇಳ್ತೀನಿ...ನನ್ನಾಣೆ ಮಾಡಿ. ನಾನು ಇವನನ್ನು.....

ಗಂಡ : ಸಾಕು ಮಾಡು ಸುಳ್ಳಿನ ಕಂತೆ. ಪಂಜರದಲ್ಲಿದ್ದ ಗಿಳೀನ್ನ ಪಂಜರದಲ್ಲೇ ಇಡ್‌ಬೇಕು. ನಡಿ ಗೊತ್ತಾಯ್ತು.

ಯಾರೋ ಒಬ್ಬ : (ಅವನನ್ನು ಅಡ್ಡೈಸುತ್ತ) ಮಿತ್ರಾ..... ನಾನು ಈ ಗದ್ದಲದಲ್ಲಿ ಮಾತಾಡಲಿಲ್ಲ.

ಗಂಡ : ನೀನೇಕೆ ಮತ್ತೆ ಮಾತಾಡ್‌ಬೇಕು. ನಾನೇನು ನಿನ್ನ ಮಿತ್ರನೆ ? ಅದೂ ಈ ಥರದ ಮಿತ್ರತ್ವ !

ಯಾರೋ ಒಬ್ಬ : ಅವಳದ್ದೇನೂ ತಪ್ಪಿಲ್ಲ.

ಗಂಡ : ಹಾಗಿದ್ರೆ ತಪ್ಪು ಯಾರದು ? ನಿಮ್ಮದೇ ?

ಹೆಂಡತಿ : ಅವರದ್ದೇನೂ ತಪ್ಪಿಲ್ಲ.

ಗಂಡ : ಮತ್ತೆ, ತಪ್ಪು ನನ್ನದೇ ? ನಿಮ್ಮಿಬ್ಬರನ್ನು ಈ ಅವಸ್ಥೇಲಿ ನೋಡ್ತಾ ಇದ್ದೀನಲ್ಲ, ಅದೇ.

ಯಾರೋ ಒಬ್ಬ : ಅವಳು ನನ್ನ ಮುಂದೆ ತನ್ನ ಸಂಚಿತ ದುಃಖವನ್ನಷ್ಟೇ ತೋಡಿಕ್ಕೊಂಡು ಮನಸ್ಸು ಹಗುರ ಮಾಡ್ಕೊಂಡಿದ್ದಾಳೆ.

ಗಂಡ : ನೀನು ಯಾರೂಂತ ? ನೀನೇನು ಅವಳ ಅಣ್ಣನೆ ? ತಮ್ಮನೇ ? ಗೆಳೆಯನೆ ? ನೆಂಟನೆ ? ಬೀಗನೆ ? ದಾಯಾದಿಯೆ ? ಗೋತ್ರದವನೆ? ಇವರಲ್ಲಿ ನೀನು ಯಾರು ?

ಯಾರೋ ಒಬ್ಬ : ಇವರಲ್ಲಿ ನಾನು ಯಾರೂ ಅಲ್ಲ. ಯಾರೋ ಒಬ್ಬ.

ಗಂಡ : ಯಾರೋ ಒಬ್ಬ ಅನ್ನೋದು ಸಂಬಂಧವಾಚಕವಲ್ಲ. ಅಲ್ದೆ ಮದ್ವೆಯಾದ ಹೆಣ್ಣೊಬ್ಬಳಿಗೆ 'ಯಾರೋ ಒಬ್ಬ' ಇರೋಕ್ಕೆ ಸಾಧ್ಯವೇ ಇಲ್ಲ.

ಯಾರೋ ಒಬ್ಬ : (ಕೂಗಿ) ಯಾಕೆ ಇರಕೂಡದು ? ಎಲ್ಲಾ ಸಂಬಂಧಗಳು ಕಡಿದು ಬಿದ್ದಾಗ ಮನುಷ್ಯನಿಗೆ ಯಾರಿರ್ತಾರೆ ಹೇಳಿ ? ಮನಸಿನ ಸುಖದುಃಖಗಳನ್ನೆಲ್ಲ ಆಪ್ತವಾಗಿ ಹಂಚಿಕೊಳ್ಳೋದಕ್ಕೆ 'ಯಾರೋ ಒಬ್ಬ' ಬೇಕೇ ಬೇಕಲ್ಲ. ಒಂದು ಬ್ರಹ್ಮಚಾರಿ ಹೆಣ್ಣು ತಾಯಿಯಂತೆ ಜಗತ್ತಿನಲ್ಲಿರೋ

ಮಕ್ಕಳನ್ನು ತನ್ನ ಸೆರಗಿನಲ್ಲಿ ಮುಚ್ಚಿಟ್ಟುಕೊಂಡಳು. ಆ ಹೆಣ್ಣುಮಗಳು ಆ ಮಕ್ಕಳಿಗೆ ಏನಾಗ್‌ಬೇಕು ? ಯಾವ ಪಾರಿವಾಳಗಳು ಈ ದಂಡೆಯ ಸುದ್ದಿ ಆ ದಂಡೆಗೊಯ್ದು ಮುಟ್ಟಿಸಿದವೊ ಆ ಪಾರಿವಾಳ ಗಳಿಗೂ ನಮಗೂ ಯಾವ ಸಂಬಂಧ ?

ಇವಳಿಗೂ ನನ್ಗೂ ಯಾವ ಸಂಬಂಧವೂ ಇಲ್ಲ. ನಾನಿವಳ ಪ್ರಿಯತಮನಲ್ಲ, ನೆಂಟ ಇಷ್ಟನೂ ಅಲ್ಲ, ಕುಲಗೋತ್ರದವನೂ ಅಲ್ಲ, ಊರವನೂ ಅಲ್ಲ, ನಾನು ಇದಕ್ಕೂ ಮೊದಲು ಇವಳನ್ನು ಎಲ್ಲಿಯೂ ನೋಡಿದ್ದಿಲ್ಲ, ಇವಳೊಂದಿಗೆ ಮಾತಾಡಿದ್ದೂ ಇಲ್ಲ. ಆದರೂ ಇವಳಿಗೂ-ನನಗೂ ಯಾವುದೋ ಒಂದು ಸಂಬಂಧ ವಿದೆ. ಯಾವುದೋ ಒಂದು ನಿಕಟ ಬಾಂಧವ್ಯ ಇದೆ. ಆ ಸಂಬಂಧ ಏನೂ ಅಂತ ಅರ್ಥಮಾಡಿಕೊಳ್ಳಲು ನಿಮಗೆ ಮತ್ತು ನಿಮ್ಮಂಥ ಅದೃಷ್ಟಹೀನರಿಗೆ ಎಷ್ಟೋ ಜನ್ಮದಲ್ಲಿ ಹುಟ್ಟಿ ಬರ್‌ಬೇಕಾಗುತ್ತದೆ.

ಗಂಡ : ನಿಮ್ಮ ಎಲ್ಲಾ ಬಡಬಡಿಕೆ ಕೇಳಿದ ಮೇಲೆ ನನಗೆ ಅರ್ಥವಾಗಿದೆ. ನಿನಗೂ ಇವಳಿಗೂ ಯಾವುದೋ ಸಂಬಂಧವಿದೆ. ನನ್ನ ಕೆಲಸ ವಾಯ್ತು. ಮುಂದಿನದು ನಾನ್ ನೋಡಿಕೊಳ್ತೀನಿ. ದಾರಿಬಿಡಿ.

ಯಾರೋ ಒಬ್ಬ : ಮೆಟ್ಟಿಕೊಂಡು ಹೋಗು.

ಗಂಡ : ಮೆಟ್ಟಿ ಅಲ್ಲ ಒದ್ದು ಹೋಗ್ತೀನಿ.

(ಅವನನ್ನು ತಳ್ಳಿಬಿಡುತ್ತಾನೆ. ಹೆಂಡತಿ ಬಿಕ್ಕಿ ಬಿಕ್ಕಿ ಅಳುತ್ತಾಳೆ. ಗಂಡ ಅವಳನ್ನು ಅದೇ ಸ್ಥಿತಿಯಲ್ಲಿ ಎಳೆದುಕೊಂಡು ಹೋಗುತ್ತಾನೆ. ಯಾರೋ ಒಬ್ಬ ನೆಲದ ಮೇಲೆ ಏನೋ ಹುಡುಕುತ್ತಿದ್ದಾನೆ. ಒಂದು ಸಣ್ಣ ಕಲ್ಲು ಕೈಯಲ್ಲಿ ಹಿಡಿದುಕೊಂಡು)

ಯಾರೋ ಒಬ್ಬ : ಸಿಕ್ತು...ಅವಳ ದುಃಖ ಸಿಕ್ತು. ಮಿಕ್ಕಿದ್ದೆಲ್ಲ ಮಣ್ಣಲ್ಲಿ ಹೋಯ್ತು. ಈ ಪುಟ್ಟ ಕಲ್ಲಿನ ಮೇಲೆ ಅವಳ ಕಣ್ಣೀರು ಬಿದ್ದಾಗ ಕಲ್ಲಿನ ಹೃದಯ ಕರಗಿ ಹೋಗಿರಬೇಕು. ಆದರೆ ಮನುಷ್ಯರ ಹೃದಯಗಳು ಈ ಕಲ್ಲಿಗಿಂತ ಎಷ್ಟು ಗಟ್ಟಿ ? ಪಾಪ ಆ ಹೆಣ್ಣಿನ ದುಃಖ ಕಳಚಿ ಬಿದ್ದಿದೆ. ಆ ದುಃಖದಲ್ಲಿ ಅವಳ ತವರುಮನೆ ಕಳೆದುಹೋಗಿದೆ.

(ಅವನ ಸುತ್ತಲೂ ಜನ ಸೇರುತ್ತಾರೆ. ಆ ಜನರ ನೂಕುನುಗ್ಗಲಿನಲ್ಲಿ ತಂದೆ ಮಗಳನ್ನು ದರದರ ಎಳೆದು ತರುತ್ತಿದ್ದಾನೆ.)

ತಂದೆ : ಎಲ್ಲಿಗೆ ಹೋಗಿದ್ದೆ ?

ಹುಡುಗಿ : ಗುಡ್ಡದಾಚೆ-ಗಿಡಗಂಟಿಗಳಲ್ಲಿ.

ತಂದೆ : ಯಾಕೆ ?

ಹುಡುಗಿ : ಸೆಗಣಿ ತಿನ್ನೋಕ್ಕೆ.
ತಂದೆ : ಹೊಟ್ಟೆತುಂಬ ತಿಂದೆಯಾ ?
ಹುಡುಗಿ : ತಿಂದೆ-ಹೊಟ್ಟೆ ತುಂಬ ತಿಂದೆ. ಮುಂದಿನ ಜನ್ಮಕ್ಕಾಗುವಷ್ಟು ತಿಂದೆ.
ತಂದೆ : ಯಾರೊಂದಿಗೆ ಹೋಗಿದ್ದೆ ?
ಹುಡುಗಿ : ಒಂದು ಪ್ರಾಣಿಯ ಜತೆ ಹೋಗಿದ್ದೆ.
ತಂದೆ : ಪ್ರಾಣಿ ಜೊತೆಗೆ ?
ಹುಡುಗಿ : ಎರಡು ಕಾಲಿನ ಪ್ರಾಣಿ ಜತೆ.
ತಂದೆ : ನಿನ್ಗೆ ಇಲ್ಲೇ ನಿಲ್ಲೋಕೆ ಹೇಳಿದ್ನಲ್ಲ ?
ಹುಡುಗಿ : ತಪ್ಪು ನಿನ್ನದು ?
ತಂದೆ : ನಂದೇನು ತಪ್ಪು ?
ಹುಡುಗಿ : ಹುಡುಗಿಯರನ್ನು ನೋಡಿಕೊಳ್ಳೋಕ್ಕಾಗದಿದ್ರೆ ಅವರನ್ನು ಜಾತ್ರೆಗೇಕೆ ಕರೆತರ್‌ಬೇಕು. ಪ್ರಾಣಿಗಳ ಆಶೆ ಪೂರೈಸೋದಕ್ಕೆ ? ನೀನು ನನ್ಗೆ ಸುಳ್ಳು ಹೇಳ್ದೆ ಏಕೆ ?
ತಂದೆ : ಯಾವ ಸುಳ್ಳು ?
ಹುಡುಗಿ : ಇದು ದೇವರ ಜಾತ್ರೆ ಅಂತ ?
ತಂದೆ : ಮತ್ತೆ, ಇದು ಯಾವ ಜಾತ್ರೆ ?
ಹುಡುಗಿ : ಕುರಿ, ಕೋಳಿಗಳನ್ನು ಬಲಿಕೊಡುವ ದೆವ್ವದ ಜಾತ್ರೆ.
ತಂದೆ : ನಿನ್ನೊಬ್ಬಳನ್ನೇ ಇಲ್ಲಿ ಬಿಟ್ಟಿದ್ದು ತಪ್ಪಾಯ್ತು.
ಹುಡುಗಿ : ನನ್ಮೇಲೆ ನಿನಗೆ ನಂಬಿಕೆಯಿರಲಿಲ್ಲ.
ತಂದೆ : ಯಾಕೆ ?
ಹುಡುಗಿ : ದುಡ್ಡಿಗಾಗಿ.
ತಂದೆ : ನಾನು ಬರೋತನಕ ಕಾಯೋಕ್ಕೆ ಏನಾಗಿತ್ತು ?
ಹುಡುಗಿ : ಮತ್ತು ನೀನು ಕೊಂಚ ಬೇಗ ಬಂದಿದ್ರೆ ಏನಾಗ್‌ತಿತ್ತು ?
ತಂದೆ : ನಾನು ಬೇಗ ಬಂದೆ. ನಿನ್ನನ್ನು ಜಾತ್ರೆಲೆಲ್ಲ ಹುಡುಕಿದೆ. ಸಂದೇಹದಿಂದ ಬೆಟ್ಟದತ್ತ ಹೋದೆ.
ಹುಡುಗಿ : ಈ ಜಾತ್ರೇಲಿ ಇಂಥದ್ದೆಲ್ಲ ನಡೆಯುತ್ತೇ ಅಂತ ಮೊದ್ಲೆ ಗೊತ್ತಿತ್ತೆ ?
ತಂದೆ : ಅವರಿವರು ಹೇಳಿದ್ದು ಕೇಳಿದ್ದೆ.
ಹುಡುಗಿ : ನನ್ನನ್ನು ನೀನು ಇಂಥ ಜಾತ್ರೆಗೆ ಯಾಕೆ ಕರ್‍ಕೊಂಡ್ ಬಂದೆ ? (ಅವಳು ಗದ್ಗದಳಾಗುತ್ತಾಳೆ)
ತಂದೆ : ನಡಿ. ಆದದ್ದು ಆಗ್ಹೋಯ್ತು. ನಿನಗೆ ಏನ್ ಬೇಕೊ ಕೊಂಡ್ಕೊಳ್ಳೋಣ ನಡಿ.

ಹುಡುಗಿ : ನನಗೆ ಬೇಕಾದದ್ದು ಸಿಕ್ತು. ಅದ್ಕೂ ಮೊದ್ಲು ಬೇಡಾದದ್ದೂ ಸಿಕ್ತು. ನನ್ನಲ್ಲಿದ್ದ ಬದುಕಿನ ಆಶೆ ಹೊರಟ್ಹೋಯ್ತು. ನಾನು.....ನಾನು.....ಈ ತುಂಬಿದ ಜಾತ್ರೇಲಿ. ಹೊಂಡ ತೋಡಿ ಹುಗಿದುಕೊಳ್ತೀನಿ.

ತಂದೆ : (ಅವಳನ್ನು ಸಂತೈಸುತ್ತ) ಹೀಗೆಲ್ಲ ಚಂಚಲ ಆಗ್‌ಬಾರದು.

ಹುಡುಗಿ : ನನ್ನ ಮುಟ್ಟಬೇಡ. ಗಂಡಸರ ಸ್ಪರ್ಷ ಅಂದ್ರೆ ವಾಕರಿಕೆ ಬರುತ್ತೆ. (ಅಷ್ಟರಲ್ಲಿ ಯಾರೋ ಒಬ್ಬ ಬರುತ್ತಾನೆ. ಅವನ ಕೈಯಲ್ಲಿ ಒಡೆದ ಬಳೆಯ ಚೂರು ಇದೆ.)

ಯಾರೋ ಒಬ್ಬ : ಹುಡುಗಿ, ಈ ಬಳೆ ಚೂರು ನಿನ್ನದೆ ? ಜಾತ್ರೇಲಿ ಸಿಕ್ತು. ಜಾತ್ರೇಲಿ ಹೆಣ್ಣು ಮಕ್ಕಳ ಕೈ ನೋಡುತ್ತ ಬಂದೆ. ಇದು ಬೇರೆಯವರದ್ದಲ್ಲ. ನಿನ್ನದೇ ಇರ್‌ಬೇಕು. ಅಲ್ನೋಡು, ನಿನ್ನ ಕೈಗಳಿಂದ ಇನ್ನೂ ರಕ್ತ ಹರಿತಾನೇ ಇದೆ. ಈ ಬಳೆಗಳ ಮೇಲೂ ರಕ್ತದ ಕಲೆಗಳು ಇವೆ. ಈ ಬಳೆಗಳನ್ನು ನೋಡಿದಾಗ ನಿನ್ನ ಕೈಯಲ್ಲಿದ್ದ ಬಳೆ ಸಹಜವಾಗಿ ಒಡೆದಂತೆ ಕಾಣೋದಿಲ್ಲ. ಅದೂ ಒಡೆದಿದೆ !

(ತನ್ನ ಕೈಗಳಲ್ಲಿ ಮುಖಮುಚ್ಚಿಕೊಂಡು ಹುಡುಗಿ ಜನಸಂದಣಿಯಲ್ಲಿ ಓಡುತ್ತಾಳೆ. ಅವಳ ಹಿಂದೆ ಅವಳ ತಂದೆ ಧಾವಿಸುತ್ತಾನೆ.)

ಯಾರೋ ಒಬ್ಬ : (ಒಡೆದ ಬಳೆಯ ಚೂರು ಕೈಯಲ್ಲಿ ಹಿಡಿದು) ಒಂದು ಮದ್ವೆಯಾಗ್ದೆ ಇರೋ ಹುಡುಗಿಯ ಒಂದು ಒಡಕು ಬಳೆಯ ಚೂರು ಕಳೆದು ಹೋಗಿದೆ. ಅಂದ್ರೆ ಒಡೆದ ಗಾಜಿನ ವಸ್ತುವಿಗೂ ಒಡೆದ ಅದೃಷ್ಟಕ್ಕೂ ಏನಾದರೂ ಸಂಬಂಧವಿದೆಯೆ ? ಗೋಲಾದ ಬಳೆ ಅಂದ್ರೆ ಬದುಕೂ ಗೋಲವಾದ ಹಾಗೆಯೇ. ಬಳೆ ಒಡೆದು ಹೋದಂತೆ ಯಾರದ್ದಾದರೂ ಜೀವನವೂ ಒಡೆದು ಹೋಗಿರಬಹುದೇ ?

(ಒಬ್ಬ ಹೂ ಮಾರುವವ ಹೂವಿನ ಬುಟ್ಟಿಯೊಂದಿಗೆ ಅತ್ತಿತ್ತ ಓಡಾಡುತ್ತ)

ಹೂಗಾರ : ಹೂವು ಬೇಕೇ ಹೂವು ? ಇಷ್ಟೇ ಇವೆ.

ಯಾರೋ ಒಬ್ಬ : ಹೂವಿನ ಮೊಗ್ಗು ಇದೆಯೆ ?

ಹೂಗಾರ : (ಒಂದು ಮೊಗ್ಗು ಎತ್ತಿ ಕೊಡುತ್ತ) ಹತ್ತು ಪೈಸೆ.

ಯಾರೋ ಒಬ್ಬ : (ಮೊಗ್ಗು ತೆಗೆದುಕೊಂಡು) ಮೊದಲು ನನ್ನ ಪ್ರಶ್ನೆಗೆ ಉತ್ತರ ಕೊಡು. ಆಮೇಲೆ ದುಡ್ಡು ಕೊಡ್ತೀನಿ. ಈ ಮೊಗ್ಗು ಯಾಕೆ ಅರಳಲಿಲ್ಲ ನಿನಗೆ ಗೊತ್ತುಂಟೆ ? (ಹೂಗಾರ ತೆಪ್ಪಗೆ ನಿಂತಿದ್ದಾನೆ) ಈ ಮೊಗ್ಗು ಅರಳುವ ಮೊದಲೇ ಅದರದೊಂದು ಪಕಳೆ ಹರಿದು ಬಿಟ್ಟಿದ್ದಾರೆ. (ಪಕಳೆ ಹರಿಯುತ್ತದೆ) ಹೂವಿಗೆ ಹೇಳಿದ 'ಅರಳು' ಅಂತ. ಆಗ ಮೊಗ್ಗು ಹೇಳಿತು. ಅರಳುವ ಮುನ್ನವೇ ನೀವು ನನ್ನ ಅಂಗಾಂಗಗಳನ್ನೆಲ್ಲ

ಹರಿದು ಬೀಸಾಡಿದರೆ ಹೇಗೆ ಅರಳುವುದು ? ಈಗ ಈ ಮೊಗ್ಗು ಸುತ್ತಲಿನ ಕತ್ತಲೆಯಲ್ಲಿ ಮುಳುಗಿ ಹೋಗಿದೆ. ಹೇಗೆ ಅಂದ್ರೆ ನಾವು ಕಣ್ಣು ಮುಚ್ಚಿದ ಕೂಡಲೆ ಸುತ್ತಲಿನ ಜಗತ್ತು ಅಂಧಕಾರಮಯ ವಾಗುವ ಹಾಗೆ.

(ಹೂಗಾರ ಅವನ ಕೈಯಲ್ಲಿದ್ದ ಮೊಗ್ಗು ಕಸಿದುಕೊಂಡು ತನ್ನ ದಾರಿ ಹಿಡಿಯುತ್ತಾನೆ. ಜಾತ್ರೆ ಮುಗಿಯುತ್ತ ಬಂದಿದೆ. ಜನ ಮನೆಗೆ ಹಿಂತಿರುಗುವ ಸಿದ್ಧತೆಯಲ್ಲಿ ಇದ್ದಾರೆ.)

(ಒಂದು ಕಡೆಯಿಂದ ಮನಸ್ಸು ಸೆಳೆಯುವ ವಾದ್ಯ ಕೇಳಿಬರುತ್ತದೆ. ವಾದ್ಯದ ಸುತ್ತಲೂ ಜನಸಂದಣಿ ಸೇರಿದೆ. ಈ ನೂಕು ನುಗ್ಗಲಿನಲ್ಲಿ ದೇವಾಲಯದ ಧರ್ಮದರ್ಶಿಯಂತಹ ಒಬ್ಬ ವ್ಯಕ್ತಿ ವೇದಿಕೆಗೆ ಬರುತ್ತಾನೆ. ವಾದ್ಯ ಮುಗಿದ ಕೂಡಲೇ ಅವನು ಮಾತು ಆರಂಭಿಸುತ್ತಾನೆ.)

ಮಹಾಜನ : ಶ್ರೀವಿಚಿತ್ರನ ಕೃಪೆಯಿಂದ ಪ್ರತಿವರ್ಷದಂತೆ ಈ ವರ್ಷವೂ ಜಾತ್ರೆ ನಿರ್ವಿಘ್ನವಾಗಿ ಮುಗೀತಾ ಬಂದಿದೆ. ಈ ವರ್ಷ ಮೊದಲ ಬಾರಿಗೆ ಜಾತ್ರೆಗೆ ಬಂದ ಮಹನೀಯರಿಗೆ ಒಂದು ಮಾತು ಹೇಳ್‌ಬೇಕೆಂದು ನಾನಿಲ್ಲಿ ಬಂದಿದ್ದೀನಿ. ಶ್ರೀವಿಚಿತ್ರದ ಜಾತ್ರೆಯ ಪರಂಪರೆ ಮತ್ತು ಪದ್ಧತಿಯಂತೆ ಸೂರ್ಯಾಸ್ತಮಾನವಾಗುವ ಮೊದಲೇ ಯಾತ್ರಿಕರು ಇಲ್ಲಿಂದ ಹೊರಟು ಹೋಗಬೇಕು. ತಪ್ಪಿ, ಗೊತ್ತಿಲ್ಲದೆ ಉಳಿದರೆ ಬಹುದೊಡ್ಡ ಅನರ್ಥ ಘಟಿಸಬಹುದು ಅಂತ ನಾನು ನಾಲಿಗೆಯಿಂದ ಹೇಳಲು ಇಷ್ಟಪಡುವುದಿಲ್ಲ. ವಿಷದ ಪರೀಕ್ಷೆ ಯಾರೊಬ್ಬರೂ ಮಾಡಬಾರದು - ಅಂತ ಮಾತ್ರ ಈ ಸೂಚನೆ ಕೊಡುತ್ತಿದ್ದೇನೆ. ಈಗ ಜಾತ್ರೆಯ ನಿಯಮದಂತೆ ಕಳೆದು ಹೋದ ವಸ್ತುಗಳ ತಪಾಸಣೆ. ಈ ಜಾತ್ರೆಯ ವೈಶಿಷ್ಟ್ಯವೆಂದರೆ ಕಳೆದು ಹೋದ ವಸ್ತುಗಳು ಕೊನೆಗೆ ದೊರೆಯುತ್ತವೆ. ಬಟ್ಟೆ ಬರೆಯಾಗಲಿ, ಹುಡುಗರು ಮಕ್ಕಳಾಗಲೀ, ದುಡ್ಡು ಕಾಸಾಗಲಿ, ಏನು ದೊರೆತರೂ ದೇವಸ್ಥಾನದಲ್ಲಿ ಸಂಗ್ರಹವಾಗಿ ಜಾತ್ರೆಯ ಕೊನೆಯಲ್ಲಿ ಈ ವೇದಿಕೆಯಲ್ಲಿ ಜಾಹೀರು ವಿಚಾರಣೆಯಾಗುತ್ತದೆ. ಯಾರ ವಸ್ತುಗಳು ಕಳೆದು ಹೋಗಿವೆಯೋ ಅವರು ಮುಂದೆ ಬರಬೇಕು. ಯಾರಿಗೆ ವಸ್ತುಗಳು ಸಿಕ್ಕು ಇನ್ನೂ ದೇವಸ್ಥಾನಕ್ಕೆ ತಂದು ಕೊಟ್ಟಿಲ್ಲವೊ ಅವರು ತಕ್ಷಣ ತಂದು ಕೊಡಬೇಕು.

ಶ್ರೀ ವಿಚಿತ್ರದ ಕೃಪೆಯಿಂದ ನಾನು ನನ್ನ ಕರ್ತವ್ಯ ನಿಭಾಯಿಸುತ್ತಿದ್ದೀನಿ. ಶ್ರೀದೇವರ ಪರಮಭಕ್ತರಾದ ನೀವು ನನ್ನೊಂದಿಗೆ ಸಹಕರಿಸಬೇಕಾಗಿ

ವಿನಂತಿ. ಎಲ್ಲರಿಗೂ ಗೊತ್ತಾಗಬೇಕು ಅಂತ ಒಂದು ವಿವರಣೆ ಕೊಡ್ತಾ ಇದ್ದೀನಿ. ವಸ್ತುಗಳ ಹರಾಜು ಹಾಕುವಾಗ ಎರಡು ಬಾರಿ ಕೂಗು ಹಾಕಲಾಗುತ್ತದೆ. ವಸ್ತುವಿನ ಮಾಲೀಕರು ಸಿಗದಿದ್ದರೆ ಮೂರನೆಯ ಸವಾಲಿಗೆ ವಸ್ತು ದೇವರ ಪಾದಾರವಿಂದಗಳಲ್ಲಿ ಅರ್ಪಿಸಲಾಗುತ್ತದೆ. ಅವು ವಸ್ತುಗಳಾದರೆ ದೇವರ ಸ್ವತ್ತಾಗುತ್ತದೆ. ವ್ಯಕ್ತಿ, ಪ್ರಾಣಿಗಳಾದರೆ.....

ನಾನು ಈಗ ನನ್ನ ಈ ಪವಿತ್ರಕಾರ್ಯ ಆರಂಭ ಮಾಡ್ತಾ ಇದ್ದೀನಿ.... ಮೊದಲನೆಯದಾಗಿ ಒಬ್ಬ ಮುದುಕ ಸಿಕ್ಕಿದ್ದಾರೆ. ಅವರ ವಯಸ್ಸು ತೊಂಬತ್ತು - ತೊಂಬತ್ತೈದು ಇರ್‌ಬಹುದು. ಅವರ ಎಲ್ಲಾ ಹಲ್ಲುಗಳು ಬಿದ್ದು ಹೋಗಿರುವುದರಿಂದ ಅವರು ಏನ್ ಮಾತಾಡ್ತಾರೆ. ಯಾವ ಭಾಷೆಯಲ್ಲಿ ಮಾತಾಡ್ತಾರೆ ಗೊತ್ತಾಗೋದಿಲ್ಲ. ಅವನ ಧೋತರ ಗೋಣಿದಾರದಿಂದ ಬಿಗಿದಿದ್ದಾರೆ.

(ಜನ ಕ್ರಮೇಣ ದೂರ ದೂರ ಸರಿಯುತ್ತಾರೆ. ಒಂದು ಬದಿಯಲ್ಲಿ ಇಬ್ಬರು ಮಾತನಾಡುತ್ತ ನಿಂತಿದ್ದಾರೆ)

ಮೊದಲಿಗ : ಮುದುಕನೆಂದರೆ...ಅನುಭವದ ಖಣಿ.

ಎರಡನೆಯವ : ಹೌದು, ಹೌದು.

ಮೊದಲಿಗ : ಮುದುಕ ಕಳೆದು ಹೋಗಬಾರದಿತ್ತು.

ಎರಡನೆಯವ : ಹೌದು, ಹೌದು.

ಮೊದಲಿಗ : ಮುದುಕರಿಂದ ಎಷ್ಟೊ ಸಹಾಯವಾಗುತ್ತೆ.

ಎರಡನೆಯವ : ಹೌದು, ಹೌದು.

ಮೊದಲಿಗ : ಮುದುಕನನ್ನು ಮನೇಲಿ ಬಿಟ್ಟು ಎಲ್ಲಿಗೆ ಬೇಕಾದರೂ ಹೋಗಿ ಬರ್‌ಬಹುದು.

ಎರಡನೆಯವ : ಹೌದು, ಹೌದು.

(ಮೊದಲಿಗನ ಪ್ರತಿವಾಕ್ಯಕ್ಕೂ ಎರಡನೆಯವ ಹೌದು ಹೌದು ಎಂದು ತಲೆ ಹಾಕುತ್ತಿರುತ್ತಾನೆ)

: ನಮ್ಮ ಮಕ್ಕಳನ್ನು ನೋಡಿಕೊಳ್ಳುವವರು ಯಾರು ?

: ನಮ್ಮ ಹಳೆಯ ಬಟ್ಟೆಗಳಿದ್ದರೆ ಸಾಕು ಅವರಿಗೆ.

: ನಾವು ಮನೇಲಿದ್ದು, ಮುದುಕನನ್ನು ಹೊರಗಿಟ್ಟು ಇಷ್ಟವಿಲ್ಲದಿದ್ದರೆ ಅವನನ್ನು ಹೊರಗಿಂದ ಹೊರಗೆ ಸಾಗಹಾಕಲು ಬರುತ್ತೆ.

(ವೇದಿಕೆಯ ಮೇಲೆ)

ಮಹಾಜನ : ಮುದುಕನನ್ನು ಕಳೆದುಕೊಂಡವರು ಬಂದು ಕರ್‌ಕೊಂಡು

ಹೋಗ್‌ಬಹುದು. ಈಗ ಮೊದಲ ಬಾರಿ...ಮುದುಕನ ಮಾತು ಸ್ವಲ್ಪ ಸ್ವಲ್ಪ ಅರ್ಥವಾಗುತ್ತ ಇದೆ. ತನ್ನ ಹೆಂಡತಿಯ ಮಾತು ಕೇಳಿ, ತನ್ನ ತಂದೆಯನ್ನು ಅವನ ಮಗನೇ ಈ ಜಾತ್ರೆಗೆ ಕಳಿಸಿದ್ದಾನಂತೆ. ಮುದುಕನ ಸಂಬಂಧಿಗಳು ಬಂದು ಕರ್‌ಕೊಂಡು ಹೋಗಬೇಕು... ಎರಡನೇ ಬಾರಿ.....ಮುದುಕನ ಬಗ್ಗೆ ಇನ್ನೊಂದು ವಿವರಣೆ ಅಂದ್ರೆ ಈತ ದೊಡ್ಡ ಮನೆತನದವನಂತೆ ಕಾಣುತ್ತಾನೆ. ಕಾರಣ ಅವನ ಸೊಂಟಕ್ಕೆ ಬೆಳ್ಳಿಯ ದಪ್ಪ ಉಡಿದಾರ ಇದೆ.

ಜನ : ಬೆಳ್ಳೀ ಉಡಿದಾರವೆ ?

(ಜನ ಹತ್ತಿರ ಬರುತ್ತಾರೆ)

(ಇಬ್ಬರು ಮಾತಾಡುವ ಮೂಲೆ)

ಎರಡನೆಯವ : ಎಂಥ ಎಡವಟ್ಟು ಹೆಂಗಸು ಇವಳು. ಧೋತರಕ್ಕೆ ಗೋಣಿದಾರ ಕಟ್ಟುವಾಗ ಉಡಿದಾರ ತೆಗೆದಿಡಬಾರದಿತ್ತೆ ?

ಮೊದಲಿಗ : ಮುದುಕ ನಿಮ್ಮವರೇ ?

(ವೇದಿಕೆಯ ಮೇಲೆ)

ಮಹಾಜನ : ಬೆಳ್ಳಿಯ ಉಡಿದಾರವಿರುವ ಮುದುಕನನ್ನು ಸಂಬಂಧಿಸಿದವರು ಕರ್‍ಕೊಂಡು ಹೋಗ್‌ಬಹುದು.....ಮೂರನೇ ಬಾರಿ.....

ಎರಡನೆಯವ : (ದೊಡ್ಡಕ್ಕೆ) ನಿಲ್ಲು...ನಿಲ್ಲು...ಅವನು ನನ್ನ ಅಪ್ಪ.

(ಜನಸಂದಣಿಯಲ್ಲಿ ನುಗ್ಗುತ್ತಾನೆ)

(ಎರಡನೆಯ ವಸ್ತು ಸವಾಲಿಗೆ ಎತ್ತಿಕೊಳ್ಳುತ್ತಾರೆ)

ಮಹಾಜನ : ಒಂದು ಟವೆಲ್ಲಿನ ಆಕಾರದ ಒಂದು ವಸ್ತು ಸಿಕ್ಕಿದೆ. ಟವಲಿನ ಮೊದಲಿನ ಬಣ್ಣ ಯಾವುದಿತ್ತು ಎಂದು ಕಂಡು ಹಿಡಿಯದಷ್ಟು ಕೊಳೆಯಾಗಿದೆ. ಅದರ ಮೇಲೆ ತರತರದ ಕಲೆಗಳಿವೆ. ಯಾವ ಕಲೆಗಳು ಅಂತ ಗೊತ್ತಾಗ್ತಾ ಇಲ್ಲ. (ಸವಾಲು ಹಾಕುತ್ತ) ಟವೆಲ್ಲು..... ಒಂದನೇ ಬಾರಿ.

(ಆ ಜನಸಂದಣಿಯಿಂದ ಒಬ್ಬ ಮುಂದೆ ಬರುತ್ತಾನೆ. ಆ ಟವೆಲ್ಲು ತನ್ನದು ಎಂದು ತೆಗೆದುಕೊಂಡು ಹೋಗುತ್ತಾನೆ. ಜನ ಅತ್ತ ಇತ್ತ ಸರಿಯುತ್ತಾರೆ. ಒಬ್ಬ ಮುದುಕ ಮಹಾಜನನ ಹತ್ತಿರ ಬರುತ್ತಾನೆ)

ಮುದುಕ : ನನ್ನದೊಂದು ಮಹತ್ವದ ವಸ್ತು ಕಳೆದ್ಹೋಗಿದೆ.

ಮಹಾಜನ : ಏನು ?

ಮುದುಕ : ಐದು ವರ್ಷದ ನನ್ನ ಹುಡುಗ ಕಳೆದು ಹೋಗಿದ್ದಾನೆ.

ಮಹಾಜನ : ನಿನಗೆ ಐದು ವರ್ಷ ಮಗ ಇದ್ದಾನೆಯ ?

ಮುದುಕ : ಹೌದು.

ಮಹಾಜನ : ನಿನ್ನ ಮಗ ಯಾರಿಗೂ ಸಿಕ್ಕಿಲ್ಲ.

ಮುದುಕ : ಸಿಗಲಿಲ್ಲ ಅಂದ್ರೆ ಹೇಗೆ ? ಕಳೆದು ಹೋದ ಮೇಲೆ ಸಿಗಲೇಬೇಕಲ್ಲ.

ಮಹಾಜನ : ಕಳೆದು ಹೋಗದಿದ್ರೆ ಸಿಗೋದ್ಹೇಗೆ ಸಾಧ್ಯ ?

ಮುದುಕ : ನಾನು ಸಾಕ್ಷಾತ್ ಅವನ ಅಪ್ಪ ಹೇಳ್ತಾ ಇದ್ದೀನಲ್ಲ - ಹುಡುಗ ಕಳೆದ್ಹೋಗಿದ್ದಾನೆ ಅಂತ.

ಮಹಾಜನ : ನಿಮ್ಮ ಹುಡುಗ ಕಳೆದು ಹೋದ್ರೆ ಈ ಜಾತ್ರೇಲಿ ಯಾರಿಗಾದ್ರೂ ಸಿಗಬೇಕಿತ್ತು. ಸಿಕ್ಕರೆ ಜಾತ್ರೆಯ ನಿಯಮದಂತೆ ನಮಗೆ ತಂದು ಕೊಡ್ತಾ ಇದ್ರು. ತಂದು ಕೊಡ್ಲಿಲ್ಲಾ ಅಂದ್ರೆ ಕಳೆದು ಹೋಗಿಲ್ಲ ಅಂತ್ಲೇ ಅರ್ಥ.

ಮುದುಕ : ಆದರೆ.....

ಮಹಾಜನ : ಇವರನ್ನು ಆಚೆ ಸರಿಸಿ. ಸುಮ್ನೆ ಸಮಯ ಹಾಳು ಮಾಡ್ತಾ ಇದಾರೆ. ನನ್ನ ಮಾತಿನ ಮೇಲೆ ವಿಶ್ವಾಸವಿಲ್ಲ ಅಂದ್ರೆ ಹೇಗೆ ?

(ಮುದುಕನನ್ನು ಜನ ಬೇರೆಡೆಗೆ ಕರೆದೊಯ್ಯುತ್ತಾರೆ. ಮಹಾಜನ ಮತ್ತೆ ತನ್ನ ಕೆಲಸ ಮುಂದುವರಿಸುತ್ತಾರೆ.)

ಮಹಾಜನ : ಒಂದು ಕಳೆದು ಹೋದ ಗಂಗಾವನ ಸಿಕ್ಕಿದೆ. ಆ ಚೌರಿಯ ಕೂದಲು ತುಂಬ ಒರಟಾಗಿವೆ. ಮನುಷ್ಯನ ಕೂದಲು ಅಂತ ಅನಿಸೋದಿಲ್ಲ. ಗಂಗಾವನ ಯಾರದ್ದು ಅಂತ ನೋಡಿ ತಗೊಂಡು ಹೋಗೋದು. ಆ ಚೌರಿಯಲ್ಲಿ ಹೇನು ಮತ್ತು ಹೇನಿನ ಮೊಟ್ಟೆ ಸಾಕಷ್ಟು ಇವೆ. ಈಗಾದ್ರೂ ಯಾರದ್ದು ಅಂತ ನೋಡಿ. ಎರಡನೇ ಬಾರಿ.....

(ಜನಸಂದಣಿಯಿಂದ ಒಬ್ಬಳು ಬಂದು ಗಂಗಾವನ ತೆಗೆದುಕೊಂಡು ಹೋಗುತ್ತಾಳೆ)

ಮಹಾಜನ : ಈಗೊಂದು ಮಹತ್ವದ ವಸ್ತು ನಿಮ್ಮ ಮುಂದೆ ಬರ್ತಾ ಇದೆ. ಒಂದು ಹುಡುಗಿಯ ಉದ್ದಂಗಿ ಸಿಕ್ಕಿದೆ. ಒಂದು ಹುಡುಗಿಯ ಅಂಗಿ ಸಿಕ್ಕಿದೆ. ಮೊದಲ ಬಾರಿ.....

(ಎಲ್ಲ ಜನ ಕುತೂಹಲದಿಂದ ನೋಡಲು ಮುಂದೆ ಬರುತ್ತಾರೆ)

ಮಹಾಜನ : ಒಂದು ಹುಡ್ಗಿ ಅಂಗಿ...ಮೊದಲ ಬಾರಿ...ಈ ಬಗ್ಗೆ ವಿಶೇಷ ವಿವರಣೆ ಅಂದ್ರೆ ಅಂಗಿಯ ಸುತ್ತಳತೆ ನೋಡಿದ್ರೆ ಆ ಹುಡುಗಿ ಎರಡು ಮೂರು ವರ್ಷದವಳಿರಬೇಕು.

(ಜನ ಹಣೆ ಹಣೆ ಚಚ್ಚಿಕೊಂಡು ಹಿಂದಕ್ಕೆ ಸರಿಯುತ್ತಾರೆ. ಜನ ಸಂದಣಿಯಲ್ಲಿ ಒಬ್ಬ ಮುನ್ನುಗ್ಗುತ್ತಾನೆ. ಅವನನ್ನು ಹೊರಗೆ ತಳ್ಳುತ್ತಾರೆ.)

ಯಾರೋ ಒಬ್ಬ : ಕಳೆದು ಹೋದ ವಸ್ತು ನಿನ್ನದೇ ?

ಮೊದಲನೆಯವ : (ಗಲಿಬಿಲಿಗೊಂಡು) ಅಲ್ಲ.

ಯಾರೋ ಒಬ್ಬ : (ಮತ್ತೊಬ್ಬನಿಗೆ) ನಿನ್ನದೇ ?

ಎರಡನೆಯವ : ಅಲ್ಲ.

ಯಾರೋ ಒಬ್ಬ : (ಇನ್ನೊಬ್ಬನಿಗೆ) ಕಳೆದುಕೊಂಡಿದ್ದು ನೀನ ?

ಮೂರನೆಯವ : ಅಲ್ಲ.

ಯಾರೋ ಒಬ್ಬ : ಅಲ್ಲದಿದ್ರೆ ನಾಯಿಯಂತೆ ಮುಂದೆ ಓಡಿದ್ದೇಕೆ ?

ಮೂರು ಜನ : ನಮಗನ್ನಿಸ್ತು...

ಯಾರೋ ಒಬ್ಬ : ಏನು ಅನ್ನಿಸ್ತು ? ನಿನಗೆ ನಿನ್ನಮ್ಮಂದು ಅನ್ನಿಸ್ತಾ ? (ಎರಡನೆಯವನಿಗೆ) ನಿನ್ಗೆ ನಿನ್ನ ತಂಗೀದು ಅನ್ನಿಸ್ತಾ ? (ಮೂರನೆಯವನಿಗೆ) ನಿನ್ಗೆ ನಿನ್ನ ಮಗಳದು ಅಂತ ಅನ್ನಿಸ್ತಾ?

(ಈ ಮೂವರೊಂದಿಗೆ ಮತ್ತೆ ಕೆಲವರು ಸೇರಿ ಯಾರೋ ಒಬ್ಬನ ಮೈಮೇಲೆ ನುಗ್ಗಿ ಹಿಂದೆ ತಳ್ಳುತ್ತಾರೆ.)

ಜನ : ನೀನು...ನೀನು...ಏನ್ ಮಾಡ್ತಿದ್ದೀಯ ?

: ನಿನ್ನಲ್ಲಿ ಸಭ್ಯತೆ ಒಂದಿಷ್ಟೂ ಇಲ್ಲ.

: ನಾಲ್ಕು ಜನರ ಮಧ್ಯೆ ಏನ್ ಮಾತಾಡ್‌ಬೇಕು, ಹೇಗೆ ಮಾತಾಡಬೇಕು ಅಂತ ಗೊತ್ತಿಲ್ಲ.

: ನಾಚಿಕೆ ಮರ್ಯಾದೆ ಒಂದೂ ಇಲ್ಲ.

: ಬಾಯಿಗೆ ಎಂಥ ದುರ್ವಾಸನೆ.

: ಹೊಲಸು ಅಂದ್ರೆ ಹೊಲಸು.

: ಗಬ್ಬು ಮನುಷ್ಯ.

: ಮಹಾಮೂರ್ಖ.

ಯಾರೋ ಒಬ್ಬ : ನೀವು ಯಾರಿಗೆ ಸಭ್ಯತೆಯ ಪಾಠ ಹೇಳ್ತಾ ಇದ್ದೀರಿ. ನೀವೇ ವಿಕೃತಿಯ ಮಹಾರೋಗದಿಂದ ಒಳಗೊಳಗೇ ಕೊಳೆತಿದ್ದೀರಿ. ನಿಮ್ಮ ಮಗಳಂತಿರುವ ಹುಡುಗಿಯನ್ನು ನೀವು ಕಾಮದೃಷ್ಟಿಯಿಂದ ನೋಡೋದಿಲ್ವೆ ? ಈ ಜನದಟ್ಟಣೆಯಲ್ಲಿ ನಿಮ್ಮ ಕಾಲುಗಳು ಎತ್ತ ಹೋಗುತ್ತವೆ, ಕಣ್ಣು ಎತ್ತ ನೋಡುತ್ತೆ ? ತುಟಿಯಿಂದ ಹೇಗೆ ಜೊಲ್ಲು ಸುರಿಯುತ್ತೆ ? ಮಗುವಿಗೆ ಎದೆಯ ಹಾಲೂಡಿಸುತ್ತಿರುವ ಹೆಣ್ಣು ಮಗಳನ್ನು ಯಾವ ದೃಷ್ಟಿಯಿಂದ ನೋಡುತ್ತೀರಿ ? ಮುಸಲಧಾರೆ ಮಳೆಯಲ್ಲಿ ನಿಂತು ಗದಗದ ನಡುಗುತ್ತಿರುವ ಹೆಣ್ಣುಗಳನ್ನು ಯಾವ ಸಹಾನುಭೂತಿಯಿಂದ ನೋಡುತ್ತೀರಿ ? ಗಂಡನನ್ನು ಕಳೆದು

ಕೊಂಡ ಹೆಣ್ಣುಮಗಳ ಬಗ್ಗೆ ನಿಮ್ಮಲ್ಲಿ ಸಹಾನುಭೂತಿ ಇದೆಯೆ ? ಬಲಾತ್ಕಾರದ ಸುದ್ದಿಗಳನ್ನು ಏಕಾಗ್ರಚಿತ್ತದಿಂದ ಓದಿ ಅದಕ್ಕೆ ಉಪ್ಪು ಖಾರ ಬೆರೆಸಿ ಮತ್ತಿಷ್ಟು ರಂಜಕವಾಗಿ ಇನ್ನೊಬ್ಬರಿಗೆ ಹೇಳಿ ಸಂತೋಷ ಪಡೋದಿಲ್ವೆ ?

ಜನ : ನೀನೂ ಯಾರ ಕುರಿತು ಹೇಳ್ತಾ ಇದ್ದೀಯ ?

: ದರಿದ್ರ ಮನುಷ್ಯ.

: ಕುಲಗೆಟ್ಟವ.

: ಬೇಜವಾಬ್ದಾರ.

: ಥರ್ಡ ಕ್ಲಾಸ್ !

: ರಿಪೇರಿ ಮಾಡಿ ಇವನಿಗೆ.

: ಒದೀರಿ.

(ಎಲ್ಲರೂ ಅವನ ಮೈಮೇಲೆ ಏರಿ ಹೋಗುತ್ತಾರೆ. ಜನದಟ್ಟಣೆಯಲ್ಲಿ ಯಾರೊ ಒಬ್ಬ ಬೀಳುತ್ತಾನೆ. ಅವನನ್ನು ತಳ್ಳುತ್ತಾರೆ, ಬಡಿಯುತ್ತಾರೆ, ಗದ್ದಲವಾಗುತ್ತದೆ)

ಮಹಾಜನ : (ಜನರನ್ನು ಶಾಂತಗೊಳಿಸುತ್ತ) ದಯಮಾಡಿ ಗಲಾಟೆ ಮಾಡ್‌ಬೇಡಿ. ಇನ್ನು ಕೆಲವೇ ವಸ್ತುಗಳು ಮಿಕ್ಕಿವೆ. ಅವುಗಳ ವಿಲೇವಾರಿ ಸೂರ್ಯ ಮುಳುಗೋದ್‌ಕ್ಕಿಂತ ಮುಂಚೆ ಮಾಡಿಬಿಡೋಣ.... ಒಂದು ಚಪ್ಪಲಿ ಸಿಕ್ಕಿದೆ ಎಡಗಾಲಿನದು. ತುಂಬ ಸವೆದು ಹೋಗಿದೆ. ಪ್ರಾಯಶಃ ಮದುವೆಗೆ ಬೆಳೆದಿರೊ ಹುಡುಗಿಯ ತಂದೆಯ ಚಪ್ಪಲಿ ಅಂತ ಕಾಣತ್ತೆ. ಚಪ್ಪಲಿಯ ಚರ್ಮ ಮತ್ತು ಉಂಗುಷ್ಟದ ಕೊಂಡಿ ಹರಿದುಹೋಗಿದೆ. ಅದನ್ನು ಸೇಫ್ಟಿಕ್ ಪಿನ್ನಿನಿಂದ ಜೋಡಿಸಿದ್ದಾರೆ. ನಿಂತ ಸ್ಥಳದಲ್ಲಿ ಎಡಗಾಲು ನೆಲಕ್ಕೆ ತಾಗದೆ ಜೋಲಿ ಹೊಡೆಯು ತ್ತಿರಬೇಕು. ಅವರು ತಮ್ಮ ಕಾಲು ನೋಡಿಕೋಬೇಕು. ಚಪ್ಪಲಿ ಸಿಕ್ಕಿದೆ. ಮೊದಲನೇ ಬಾರಿ.....

(ಒಬ್ಬನು ಮುಂದೆ ಬಂದು ಚಪ್ಪಲಿ ಒಯ್ಯುತ್ತಾನೆ)

ಇಲ್ಲಿ ತಂದುಕೊಟ್ಟ ಎಲ್ಲ ವಸ್ತುಗಳ ವಿಲೇವಾರಿ ಆದಂತಾಯ್ತು. ಇನ್ನಾರ ಬಳಿಯಾದ್ರೂ ಕಳೆದುಹೋದ ವಸ್ತುಗಳಿದ್ರೆ ತಂದುಕೊಡ ಬೇಕು. ವೇಳೆ ತುಂಬ ಕಡಮೆಯಿದೆ. ಎಲ್ಲರೂ ಅವಸರದಲ್ಲಿದ್ದಾರೆ. ಸೂರ್ಯಾಸ್ತಮಾನವಾಗುವ ಸಮಯ ಸಮೀಪಿಸ್ತಾ ಇದೆ.

(ಯಾರಾದರೂ ಬರುತ್ತಾರೆಯೆ ಎಂದು ಕೆಲವು ಸಮಯ ದಾರಿ ಕಾಯುತ್ತಾನೆ) ನನಗನ್ನಿಸುತ್ತೆ ಎಲ್ಲಾ ವಸ್ತುಗಳ ಯೋಗ್ಯ ವಿಲೇವಾರಿ

ಆಯ್ತು. ಇದೆಲ್ಲ ಶ್ರೀದೇವ ವಿಚಿತ್ರನ ಕೃಪೆಯಿಂದ ಸುರಳೀತವಾಗಿ ಮುಗೀತು. ಇಲ್ಲಿಗೆ ನನ್ನ ಕೆಲಸ ಆಯ್ತು.....ಹೋಗ್ತೀನಿ.

(ವೇದಿಕೆಯಿಂದ ಮಹಾಜನ ಕೆಳಗಿಳಿಯಲು ನೋಡುತ್ತಾನೆ. ಅಷ್ಟರಲ್ಲಿ ಯಾರೋ ಒಬ್ಬ ಜೋರಾಗಿ ಕೂಗುತ್ತಾನೆ)

ಯಾರೋ ಒಬ್ಬ : (ಜನಸಂದಣಿಯಿಂದ ಬರುತ್ತ) ತಾಳು ತಾಳು...ನನಗೆ ಕೆಲವು ವಸ್ತುಗಳು ಸಿಕ್ಕಿವೆ. (ವಸ್ತುಗಳನ್ನು ತೋರಿಸುತ್ತಾನೆ.)

ಯಾರೋ ಒಬ್ಬ : ಇದಿಷ್ಟೇ ಅಲ್ಲ. ಇವಿಷ್ಟು ಕಣ್ಣಿಗೆ ಕಾಣೋ ವಸ್ತುಗಳು. ಕಣ್ಣಿಗೆ ಕಾಣದಿರುವ ವಸ್ತುಗಳೂ ಈ ಜಾತ್ರೆಯಲ್ಲಿ ಕಳೆದು ಹೋಗಿವೆ. ಅವು ನನಗೆ ಸಿಕ್ಕಿವೆ.

ಮಹಾಜನ : (ಸಂದೇಹದಿಂದ ನೋಡುತ್ತ) ಇದು ತಮಾಷೆ ಮಾಡುವಂಥ ಹೊತ್ತಲ್ಲ. ಅಲ್ಲಿ ಪಶ್ಚಿಮದತ್ತ ಸೂರ್ಯನನ್ನು ನೋಡು.....ಅವನು ಯಾರಿಗೂ ಕಾಯೋದಿಲ್ಲ.

ಯಾರೋ ಒಬ್ಬ : ಆದರೆ ಈ ವಸ್ತುಗಳ ವಿಚಾರಣೆ ಆಗ್ಲೇಬೇಕು.

ಮಹಾಜನ : ಇದೆಂಥ ವಸ್ತುಗಳು. ಇವಕ್ಕೆ ಯಾವ ಬೆಲೆ ಇದೆ ? ಇಂಥ ಸಾವಿರಾರು ವಸ್ತುಗಳು ಜಾತ್ರೇಲಿ ಕಳೆದು ಹೋಗಿರಬಹುದು. ಕೆಲವು ಕಾಲಡಿಯಲ್ಲಿ ಸಿಕ್ಕು ಮಣ್ಣಿನಲ್ಲಿ ಬೆರೆತು ಹೋಗಿರ್‌ಬಹುದು.

ಯಾರೋ ಒಬ್ಬ : ಕಾಲಡಿಯಲ್ಲಿ ಬಿದ್ದು ತುಳಿಯಲ್ಪಡುವ ವಸ್ತುಗಳಿಗೆ ಬೆಲೆ ಇಲ್ವೆ ?

ಮಹಾಜನ : ಯಾಕಿಲ್ಲ. ಯಾರದ್ದಾದರೂ ಮೂಗಿನ ನತ್ತು ಕಳೆದು ಹೋದರೆ ಅದಕ್ಕೆ ಬೆಲೆಯಿದ್ದೇ ಇದೆ. ಆದರೆ ಅದು ಬಂಗಾರದ್ದಾಗಿರಬೇಕು ಅಷ್ಟೆ.

ಯಾರೋ ಒಬ್ಬ : ಮೂಗಿನ ನತ್ತಿಗಿಂತ ಮೂಗೇ ಕಳೆದು ಹೋದ್ರೆ ಅದಕ್ಕೆ ಬೆಲೆ ಇಲ್ವೆ?

ಮಹಾಜನ : ನಿನ್ನ ಹತ್ರ ಸುಮ್ನೆ ಚರ್ಚೆ ಮಾಡೋಕ್ಕೆ ಇದು ಹೊತ್ತಲ್ಲ. ಮುಖ್ಯವೆಂದ್ರೆ ನಮ್ಮ ಹತ್ರ ಸಮಯದ ಕೊರತೆಯಿದೆ. (ಜನಗಳಿಗೆ ಹೇಳುತ್ತ) ಇನ್ನು ಇಲ್ಲಿಂದ ಹೊರಡಿ. ಕಳೆದು ಹೋದ ಅಧಿಕೃತ ವಸ್ತುಗಳು ವಿಚಾರಣೆ ಆಯ್ತು. ಇನ್ನು ತಡಮಾಡಬೇಡಿ...ಮುಂದಿನ ಸಿದ್ಧತೆ ಮಾಡಿ.

(ವೇದಿಕೆಯ ಮೇಲಿಂದ ಇಳಿಯುತ್ತಾನೆ)

ಯಾರೋ ಒಬ್ಬ : (ವೇದಿಕೆ ಏರುತ್ತಾನೆ) ನಿಲ್ಲಿ ಎಲ್ಲಿಗೆ ಹೋಗ್ತಿದ್ದೀರ ? ಜಾತ್ರೆಯ ನಿಯಮದಂತೆ ಕಳೆದು ಹೋದ ವಸ್ತುಗಳ ವಿಚಾರಣೆ ನಡೆಯಲೇ ಬೇಕು. ನನ್ನ ಬಳಿ ಜಾತ್ರೆಯಲ್ಲಿ ಸಿಕ್ಕ ಕೆಲವು ವಸ್ತುಗಳು ಇವೆ. ಮೊದಲನೆಯದಾಗಿ.....

ಮಹಾಜನ : (ಯಾರೋ ಒಬ್ಬನನ್ನು ಕೆಳಗೆ ಇಳಿಸಿ ತಾನೇ ವೇದಿಕೆಯ ಮೇಲೆ ನಿಂತು ಕೊಳ್ಳುತ್ತಾನೆ.) ಜಾತ್ರೆಯಲ್ಲಿ ಕಳೆದುಕೊಂಡ ವಸ್ತುಗಳ ಅಧಿಕೃತ ವಿಚಾರಣೆ ಮುಗಿದ್ಹೋಗಿದೆ. ಈಗ ನಡೀತಾ ಇರೋದು ಅಧಿಕೃತವಲ್ಲ. ಯಾಕಂದರೆ ಜಾತ್ರೆಯ ಪರಂಪರೆ ಮತ್ತು ಪದ್ಧತಿಯಂತೆ ಇಲ್ಲಿ ನಿಲ್ಲುವ ಅಧಿಕಾರ ನನಗೆ ಮಾತ್ರ ಇದೆ. ನಾನು ಮತ್ತು ನನ್ನ ಮನೆತನದ ಜನರನ್ನು ಬಿಟ್ಟರೆ ಈ ಪವಿತ್ರ ವೇದಿಕೆಯ ಮೇಲೆ ನಿಲ್ಲುವ ಅಧಿಕಾರ ಯಾರಿಗೂ ಇಲ್ಲ.

(ಮಹಾಜನ ವೇದಿಕೆಯಿಂದ ಇಳಿಯುತ್ತಾನೆ. ಯಾರೋ ಒಬ್ಬ ಮತ್ತೆ ವೇದಿಕೆ ಏರುತ್ತಾನೆ)

ಯಾರೋ ಒಬ್ಬ : ನಾನು ಯಾರದ್ದೋ ಹಕ್ಕು ಕಸಿದುಕೊಳ್ಳಲು ಇಲ್ಲಿ ಬಂದು ನಿಂತಿಲ್ಲ. ಯಾರ ವಸ್ತು ಕಳೆದಿದೆಯೋ ಅದು ಅವರಿಗೆ ಸೇರಬೇಕು ಎಂಬ ಉದ್ದೇಶದಿಂದ ಬಂದು ನಿಂತಿದ್ದೇನೆ.

ಮಹಾಜನ : (ಅವನನ್ನು ಹಿಡಿದು ಕೆಳಗಿಳಿಸಿ ತಾನು ವೇದಿಕೆ ಏರಿ ನಿಲ್ಲುತ್ತಾನೆ)

ಯಾರೋ ಒಬ್ಬ : ಯಾರಿಗೆ ಏನು ಬೇಕೋ ಅದು ಅವರವರಿಗೆ ಸಿಕ್ಕಿದೆ. ಇನ್ನು ಸಮಯ ವ್ಯರ್ಥ ಮಾಡಬೇಡಿ. ತಡಮಾಡಿದರೆ ನೀವು ಜೀವಮಾನದಲ್ಲಿ ಕೇಳದ, ಬೇಡದ, ಅಪಾಯದ ಕ್ಷಣಗಳು ಬರಬಹುದು. ತಡ ಮಾಡಿದ್ರೆ ಶಾಪಿತ ಕಲ್ಲಾಗಿ, ಈ ಬಂಡೆಗಳಲ್ಲಿ ಒಂದಾಗಿ ಇಲ್ಲೇ ಬಿದ್ದಿರಬೇಕಾಗುತ್ತೆ. ಅಲ್ನೋಡಿ, ಸೂರ್ಯ ಎಲ್ಲಿದ್ದಾನೆ. (ವೇದಿಕೆ ಇಳಿದು ಸರಸರ ಹೋಗುತ್ತಾನೆ. ಯಾರೋ ಒಬ್ಬ ಮತ್ತೆ ವೇದಿಕೆ ಏರುತ್ತಾನೆ.)

ಯಾರೋ ಒಬ್ಬ : ಈ ವಸ್ತುಗಳ ವಿಚಾರಣೆಯಾಗುವವರೆಗೆ ದಯಮಾಡಿ ಯಾರೂ ಹೊರಡಬೇಡಿ. ಇಲ್ಲದಿದ್ರೆ ನಿಮ್ಮ ಜಾತ್ರೆ ನಿರ್ವಿಘ್ನವಾಗಿ ಮುಕ್ತಾಯ ವಾಗುವುದಿಲ್ಲ. ನೀವು ದೇವರಿಗೆ ಬೇಡಿಕೊಂಡ ಹರಕೆ, ಮಾಡಿದ ಸೇವೆಗಳೆಲ್ಲ ವ್ಯರ್ಥವಾದಾವು. ಜೊತೆಗೆ ಪಾಪದ ಧಣಿ ಗಳಾಗುತ್ತೀರಿ.

ಜನ : ಏಯ್...ಭಾಷಣ ಯಾಕೆ ಮಾಡ್ತಿ ?

: ಯಾವ ವಸ್ತು ಸಿಕ್ಕಿದೆ ಅಂತ ಮೊದ್ಲು ಹೇಳು.

: ಅನಗತ್ಯ ಸಮಯ ಯಾಕೆ ಕೊಲ್ಲುತ್ತೀ ?

: ಇದು ತುಂಬ ಸಂದಿಗ್ಧ ಸಮಯ ಅಂತ ತಿಳ್ಕೋ.

ಯಾರೋ ಒಬ್ಬ : ಮೊದಲನೆಯದಾಗಿ, ಗೆರಟೆಯಲ್ಲಿದ್ದ ಮೂರು ದುಡ್ಡು ಕಳೆದಿದೆ. ಈ ಮೂರೂ ದುಡ್ಡಿನ ಮೇಲೆ ಮೂರು ಮುಖಗಳ ಒಂದು

ಪ್ರಾಣಿಯ ಚಿತ್ರ ಇದೆ. ಮೂರು ಮುಖಗಳು ಒಂದೇ ಕಡೆಗಿದ್ರೂ ಅವುಗಳ ದೃಷ್ಟಿ ಮಾತ್ರ ಬೇರೆ-ಬೇರೆ ಕಡೆ ಇದೆ. ಒಂದು ಕುಣಿಯುವ ಕೋತಿ ಕಳೆದ್ಹೋಗಿದೆ. ಈ ಕೋತಿಯ ಬಗ್ಗೆ ಹೇಳ್‌ಬೇಕಂದ್ರೆ ಈ ಕೋತಿ ಇನ್ನು ಹುಟ್ಟೇ ಇಲ್ಲ. ಒಬ್ಬ ಹುಡುಗನ ಕೈಯಲ್ಲಿದ್ದ ಒಂದು ಕಡ್ಲೆಕಾಳು ಕಳೆದ್ಹೋಗಿದೆ. ಆ ಕಡ್ಲೆಕಾಳಿನಲ್ಲಿ ಅವನ ಬಾಲ್ಯ ಅಡಗಿ ಕೊಂಡಿದೆ. ನೋಡಿ ಈ ಕಡ್ಲೆಕಾಳಿನಲ್ಲಿ ಎಂಥ ಲವಲವಿಕೆಯಿದೆ. (ಕಡ್ಲೆಕಾಯಿ ಅಂಗೈ ಮೇಲಿಟ್ಟುಕೊಂಡು ತೋರಿಸುತ್ತಾನೆ. ಹಿನ್ನೆಲೆಯಲ್ಲಿ ಮಗುವಿನ ಮುಗ್ಧನಗೆ ಕೇಳಿ ಬರುತ್ತದೆ.) ಈ ಜಾತ್ರೆಯಲ್ಲಿ ಕಲ್ಲಿನ ಮೇಲೆ ಬಿದ್ದ ಒಂದು ದುಃಖದ ಹನಿ ಕಳೆದು ಹೋಗಿದೆ. ಆ ಕಣ್ಣೀರಿನಲ್ಲಿ ಅವಳ ತವರುಮನೆಯ ಕಥೆ ಅಡಗಿದೆ. (ಒಂದು ಹೆಣ್ಣು ಗದ್ಗದ ಅಳುವುದು ಕೇಳಿಬರುತ್ತದೆ.) ಜಾತ್ರೆಯಲ್ಲಿ ಒಂದು ಹನಿ ರಕ್ತ, ಒಂದು ಕಡೆ ಒಡೆದ ಬಳೆ ಕಳೆದು ಹೋಗಿದೆ. (ಬಳೆಯ ತುಂಡು ಎರಡೂ ಕಡೆಯಿಂದ ಮುರಿಯುತ್ತಾನೆ. ಆಗ ಹಿನ್ನೆಲೆಯಲ್ಲಿ ಹುಡುಗಿಯ ಆರ್ತದನಿ ಕೇಳಿ ಬರುತ್ತದೆ. ಜನ ದಿಗಿಲುಗೊಂಡು ಅತ್ತ-ಇತ್ತ ಸರಿಯತೊಡಗುತ್ತಾರೆ)

ಯಾರೋ ಒಬ್ಬ : ಜಾಗ್ರತೆ !.....ಅರ್ಧದಲ್ಲಿ ವಿಚಾರಣೆ ಬಿಟ್ಟು ಓಡಿ ಹೋದ್ರೆ. ಈ ಜಾತ್ರೆಯಲ್ಲಿ ನನಗೆ ಈ ವಸ್ತುಗಳು ಸಿಕ್ಕಿವೆ. ಇದರರ್ಥ ಅವು ಕಳೆದು ಹೋಗಿವೆ. ಅವುಗಳ ಸಾರ್ವಜನಿಕ ವಿಚಾರಣೆ ಆಗಬೇಕು. ಇಲ್ಲದಿದ್ರೆ ಈ ಜಾತ್ರೆ ಪೂರ್ಣ ಆಗಲಿಕ್ಕಿಲ್ಲ. ಅಪೂರ್ಣವಾಗಿ ಉಳಿಯುತ್ತದೆ. ಈ ಅಪೂರ್ಣ ಜಾತ್ರೆಯ ಪಾಪ ನೀವು ಸಾಯೋವರ್‍ಗೂ ನಿಮ್ಮ ತಲೇಲಿ ಭಗಭಗಾಂತ ಉರೀತಾ ಇರತ್ತೆ. (ದೊಡ್ಡ ದನಿಯಲ್ಲಿ) ಜಾತ್ರೆಯಲ್ಲಿ ಯಾರ ಬಾಲ್ಯ ಕಳೆದು ಹೋಗಿದೆ ? ಯಾರ ಸುಖ ಕಳೆದು ಹೋಗಿದೆ ? ಯಾರ ಜಾಣತನ ಕಳೆದು ಹೋಗಿದೆ ? ಯಾರದ್ದೋ ಮುಗ್ಧತೆ, ಯಾರದ್ದೊ ಪುರುಷಾರ್ಥ, ಯಾರದ್ದೋ ಸ್ವಾಭಿಮಾನ, ಹೆಚ್ಚಿನ ಮಾಹಿತಿ ಕೊಡೋದಾದ್ರೆ ಮಂಗನಿಂದ ಮನುಷ್ಯ ಆದಂದಿನಿಂದ ಮನುಷ್ಯ ಜಾತಿಯ ಮನುಷ್ಯತ್ವವೇ ಕಳೆದು ಹೋಗಿದೆ.

(ಜನ ತಮ್ಮ ತಮ್ಮೊಳಗೇ ಮಾತಾಡುತ್ತಿದ್ದಾರೆ)

ಜನ : ಇದ್ಯಾಕೊ ಸರಿ ಕಾಣ್ತಾ ಇಲ್ಲ.

: ಈ ಪ್ರಕರಣ ಕೈಮೀರಿ ಹೋಗಿದೆ.

: ಜಾತ್ರೆಗೂ ಮನುಷ್ಯತ್ವಕ್ಕೂ ಇರೋ ಸಂಬಂಧ ಏನು ?

: ಮೂಗು ಎಲ್ಲಿ ? ಮತ್ತು ಇಳಿಗೆಯ ಮಣಿ ಎಲ್ಲಿ ? ಎಲ್ಲಿಗೆಲ್ಲಿಯ ಸಂಬಂಧ ?

: ಇದು ಈ ಪವಿತ್ರ ವೇದಿಕೆಯ ಅಪಮಾನ.

: ಶ್ರೀವಿಚಿತ್ರ ಜಾತ್ರೆಯ ದುರುಪಯೋಗ.

ಯಾರೋ ಒಬ್ಬ : (ಸವಾಲು ಕೂಗುತ್ತ) ಮನುಷ್ಯನ ಮನುಷ್ಯತ್ವ ಕಳೆದು ಹೋಗಿದೆ... ಮೊದಲ ಬಾರಿ...ಯಾರು ಕಳಕೊಂಡಿದ್ದಾರೋ ಬಂದು ತಗೊಂಡು ಹೋಗಬೇಕು.

ಜನ : ನಮಗೆ ಅದರ ಅಗತ್ಯವಿಲ್ಲ.

: ನಿನ್ನ ಹತ್ರಾನೇ ಇಟ್ಕೋ.

: ನೀನೇ ಇಟ್ಕೊ-ನಿನಗೆ ಲಾಭವಾಗ್ಲಿ.

(ಎಲ್ಲರೂ ದೂರ ಹೋಗುತ್ತಾರೆ. ಒಬ್ಬ ಮುದುಕ ಮಾತ್ರ ಇರುತ್ತಾನೆ. ಅವನು ಯಾರೋ ಒಬ್ಬನನ್ನು ಸಮೀಪಿಸುತ್ತಾನೆ.)

ಮುದುಕ : ಈ ಜಾತ್ರೆಯಲ್ಲಿ ನನ್ನದೊಂದು ಮಹತ್ವದ ವಸ್ತು ಕಳೆದುಹೋಗಿದೆ.

ಯಾರೋ ಒಬ್ಬ : ಹೇಳಿ.

ಮುದುಕ : ನನ್ನ ಐದು ವರ್ಷದ ಮಗ ಕಳೆದು ಹೋಗಿದ್ದಾನೆ.

ಯಾರೋ ಒಬ್ಬ : ಹೇಗಿದ್ದಾನೆ ಆತ ?

ಮುದುಕ : ನೋಡೋಕ್ಕೆ ಮುದ್ದಾಗಿದ್ದಾನೆ. ಮಾತಾಡಲು ಜಾಣ. ನಡವಳಿಕೆಯಲ್ಲಿ ತುಂಬ ಚತುರ.

ಯಾರೋ ಒಬ್ಬ : ಇಷ್ಟೆಲ್ಲ ಸದ್ಗುಣಗಳಿದ್ರೂ ಕಳೆದುಹೋದನೆ ?

ಮುದುಕ : ಪ್ರಾಯಶಃ ಹೀಗಿರೋದ್ರಿಂದ಼್್ಲೆ ಕಳೆದುಹೋಗಿರಬೇಕು. ಶುದ್ಧ ಪೆದ್ದನಾಗಿದ್ರೆ ಕಳೆದು ಹೋಗ್ತಿರಲಿಲ್ಲವೇನೊ.

ಯಾರೋ ಒಬ್ಬ : ಶುದ್ಧ ಪೆದ್ದನಾದ್ರೆ ನೀವು ಅವನನ್ನು ಹುಡುಕ್ತಾ ಇರಲಿಲ್ವೆ ?

ಮುದುಕ : ಅದ್ಹೇಗೆ ಸಾಧ್ಯ ? ಜಾಣ ಮತ್ತು ಪೆದ್ದ ಕರಳು ಬಳ್ಳಿಗೆ ಒಂದೇ ಅಲ್ವೆ?

ಯಾರೋ ಒಬ್ಬ : ಮಗ ಒಬ್ಬನೇ ?

ಮುದುಕ : ಹೌದು ಒಬ್ಬನೇ. ಅವನಿಗೋಸ್ಕರ ಜೀವ ಚಡಪಡಿಸ್ತಾ ಇದೆ. ಇಬ್ಬರು ಮೂವರಾದ್ರೆ ಮನಸ್ಸಿಗೊಂದು ಸಮಾಧಾನ ಹೇಳಿ ಬಿಡಬಹುದಾಗಿತ್ತು. ಅವನು ಇಲ್ಲಿ ಕಳೆದು ಹೋಗಿದ್ದಾನೆ. ನನಗೆ ಅಲ್ಲಿ ಅನ್ನ ರುಚಿಸೋದಿಲ್ಲ. ಅವನಿದ್ರೆ ನನಗೆ ಎಷ್ಟೋ ಕೆಲಸಕ್ಕೆ ಸಹಾಯ ಮಾಡ್ತಿದ್ದ. ಈಗ ದನ ಕಾಯುವವರಿಲ್ಲದೆ ದನ ಕೊಟ್ಟಿಗೆಯಲ್ಲಿ ಕೂಡಿ ಹಾಕಬೇಕಾದ ಪರಿಸ್ಥಿತಿ ಬಂದೊದಗಿದೆ. ಒಮ್ಮೊಮ್ಮೆ ಅರಿಷಿಣ, ಮೆಣಸಿನಕಾಯಿ ಬೇಕಾದ್ರೂ ನಾನೇ ಯಾರದಾದ್ರೂ

ಹಿತ್ತಲಿಗೆ ಹೋಗಿ ಕದ್ದುಕೊಂಡು ಬರ್‌ಬೇಕಾಗುತ್ತೆ. ನನ್ನ ಈ ವಯಸ್ಸಿನಲ್ಲಿ ಅದೆಲ್ಲ ಸರಿಕಾಣೋದಿಲ್ಲ. ಜನರ ಚಿಕ್ಕ ಚಿಕ್ಕ ಮಕ್ಕಳು ಸಮುದ್ರಕ್ಕೆ ಹೋಗಿ ಮೀನು ಹಿಡ್ಕೊಂಡು ಬರ್ತಾರೆ. ನಾನು ನಾಲ್ಕಾಣೆ ಮೀನಿಗೆ ಪೇಟೇಲಿ ಚೌಕಾಸಿ ಮಾಡ್ತಾ ನಿಲ್ಲಬೇಕಾಗತ್ತೆ...ನನಗೆ ಹುಡುಗನ ನೆನಪು ಕಾಡ್ತಾ ಇದೆ. ಹುಡುಗನ್ನ ಕಳಕೊಂಡ ದುಃಖ ಸಹಿಸೋಕ್ಕೆ ಆಗ್ತಾ ಇಲ್ಲ.

ಯಾರೋ ಒಬ್ಬ: ನಿನ್ನ ಮಗ ಈ ಜಾತ್ರೇಲಿ ಯಾವಾಗ ಕಳೆದು ಹೋದ ?

ಮುದುಕ : ಇದೇ ಜಾತ್ರೇಲಿ ಕಳೆದ್ಹೋಗಿದ್ದಾನೆ. ಆದರೆ ಈಗಲ್ಲ, ಇಪ್ಪತ್ತು ವರ್ಷಗಳ ಹಿಂದೆ.

ಯಾರೋ ಒಬ್ಬ: ಇನ್ನೂ ಸಿಗಲಿಲ್ವೆ ?

ಮುದುಕ : ಇಲ್ಲ. ಪ್ರತಿ ವರ್ಷ ಜಾತ್ರೆಗೆ ಬಂದು ಹುಡುಕ್ತೀನಿ. ಇದು ಇಪ್ಪತ್ತನೆಯ ವರ್ಷ. ಪ್ರತಿ ವರ್ಷಾನೂ ಹುಡುಗ ಸಿಕ್ಕೇ ಸಿಗ್ತಾನೆ ಅಂತ ಬರ್ತೀನಿ. ಜಾತ್ರೆ ಈಗ ಮುಗೀತಾ ಬಂದ್ರು ನನ್ನ ಹುಡುಗ ಸಿಗ್ತಾನೆ ಅಂತ ನನ್ನ ಅಂತರಂಗ ಹೇಳತ್ತೆ.

ಯಾರೋ ಒಬ್ಬ: ಸಿಕ್ಕರೆ, ನಿಮ್ಮ ಇಪ್ಪತ್ತು ವರ್ಷದ ಶ್ರಮ ಸಾರ್ಥಕವಾದ ಹಾಗೆ.

ಮುದುಕ : ನಿಜವೇ ?

ಯಾರೋ ಒಬ್ಬ: ನಿನ್ನ ಮಗ ಈಗ ನಿನಗೆ ಸಿಕ್ಕ.

ಮುದುಕ : (ದೇವರಿಗೆ ಕೈ ಮುಗಿಯುತ್ತ) ಶ್ರೀವಿಚಿತ್ರನ ಕೃಪೆಯಾದರೆ ಸಾಕು. ಎಲ್ಲಿದ್ದಾನೆ ನನ್ನ ಮಗ ? ತೋರಿಸು ನನಗೆ. ಯಾವಾಗ ಅವನನ್ನ ನೋಡ್ತೀನೊ ಅಂತಾಗಿದೆ.

ಯಾರೋ ಒಬ್ಬ: ಇಲ್ನೋಡಿ, ನಿಮ್ಮ ಮುಂದೆ ನಿಂತಿದ್ದೀನಿ.

ಮುದುಕ : (ಅರಸುತ್ತ) ಮತ್ತೆ ನನಗೆ ಯಾಕೆ ಕಾಣೋಲ್ಲ.

ಯಾರೋ ಒಬ್ಬ: ಇಲ್ನೋಡಿ, ನನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡಿ. ಯಾರು ಕಾಣ್ತಾರೆ ?

ಮುದುಕ : ನನಗೆ ಏನೂ ಕಾಣ್ತಾ ಇಲ್ಲ. ಎಲ್ಲಾ ಕತ್ತಲೆ.....ಕತ್ತಲೆ.

ಯಾರೋ ಒಬ್ಬ: ಕತ್ತಲೆ ನೋಡ್‌ಬೇಡಿ. ಮಗನನ್ನು ನೋಡಿ.

ಮುದುಕ : ಕಾಣ್ತಾ ಇಲ್ಲ.

ಯಾರೋ ಒಬ್ಬ: ಕಣ್ಣು ಮುಚ್ಚಿ ನೋಡಿದ್ರೆ ಹೇಗೆ ಕಾಣೋಕ್ಕೆ ಸಾಧ್ಯ ? ನಾನೇ ನಿಮ್ಮ ಮಗ.

ಮುದುಕ : ನೀನೇ ?

ಯಾರೋ ಒಬ್ಬ: ಹೌದು. ನಾನೇ ಇಪ್ಪತ್ತು ವರ್ಷಗಳ ಹಿಂದೆ ನಾನೇ ಈ ಜಾತ್ರೆಯಲ್ಲಿ ಕಳೆದು ಹೋಗಿದ್ದೆ. ಈಗ ನನ್ನನ್ನು ಮನೆಗೆ ಕರ್ಕೊಂಡು ಹೋಗು.

ನಿಮ್ಮ ದನಕರುಗಳನ್ನು ನಾನು ನೋಡ್ಕೋತೀನಿ. ಮೀನಿಗಾಗಿ ಸಮುದ್ರ ದಂಡೆಯಲ್ಲಿ ಅಲೀತೀನಿ. ಸಂಸಾರಕ್ಕೆ ಬೇಕಾಗುವ ಉಪ್ಪು ಖಾರ ಅಲ್ಲಿ ಇಲ್ಲಿ ಸುತ್ತಾಡಿ ತರ್ತೀನಿ. ನೀವು ಸತ್ತರೆ ಹನ್ನೆರಡು ದಿನ, ಕರ್ತವ್ಯ ದಕ್ಷ, ಆದರ್ಶ ನನ್ನ ತಂದೆ ತೀರ್ಕೊಂಡ್ರು ಅಂತ ಎದೆ ಬಡಿದುಕೊಂಡು ಅಳ್ತೀನಿ.

ಮುದುಕ : ನಿನ್ನ ಮಾತಿನಿಂದ ನೀನು ನನ್ನ ಮಗ ಅಂತ ಅನಿಸೋದಿಲ್ಲವಲ್ಲ.

ಯಾರೋ ಒಬ್ಬ : ಇಪ್ಪತ್ತು ವರ್ಷ ಕಳೆದುಹೋದ ಮಗ ಇದಕ್ಕಿಂತ ಹೆಚ್ಚೇನು ಮಾತಾಡಬಲ್ಲ ?

ಮುದುಕ : ಮಾತಾಡೋದ್ ಇರ್ಲಿ. ನೀನಂತೂ ತೆಂಗಿನಮರ ಬೆಳೆದ ಹಾಗೆ ಬೆಳೆದಿದ್ದೀಯಾ ! ನನ್ನ ಮಗ ಇಷ್ಟು ದೊಡ್ಡವನಲ್ಲ. ಅವನು ಐದು ವರ್ಷದ ಮಗು.

ಯಾರೋ ಒಬ್ಬ : ಇಪ್ಪತ್ತು ಮತ್ತು ಐದು ಕೂಡಿಸಿದ್ರೆ ಎಷ್ಟು ? ಇದು ಸರಳ ಗಣಿತ.

ಮುದುಕ : ಅದ್ಹೇಗೆ ಸಾಧ್ಯ ? ನೀನು ಸುಳ್ಳಾಡ್ತಾ ಇದ್ದೀಯಾ. ಹೇಗಾದ್ರೂ ಮಾಡಿ ನನ್ಗೆ ಗಂಟು ಬೀಳ್‌ಬೇಕು ಅಂತ ಹೀಗೆಲ್ಲ ಸೋಗು ಮಾಡ್ತಿದ್ದೀಯ. ನಿಜಕ್ಕೂ ನೀನು ನನ್ನ ಮಗ ಅಲ್ಲ. ಅವನಿಗೆ ಕೇವಲ ಐದು ವರ್ಷ.

ಯಾರೋ ಒಬ್ಬ : ಒಂದು ಮಾತು ಹೇಳಿ. ಈ ಭೂಮಿಯ ಕೆಳಗೆ ಏನಿದೆ ?

ಮುದುಕ : ಪಾತಾಳ.

ಯಾರೋ ಒಬ್ಬ : ಮೇಲೆ ?

ಮುದುಕ : ಸ್ವರ್ಗ.

ಯಾರೋ ಒಬ್ಬ : ಈ ಸಮುದ್ರಕ್ಕೆ ಏರಿಳಿತ ಹೇಗೆ ಉಂಟಾಗತ್ತೆ ?

ಮುದುಕ : ಶ್ರೀವಿಚಿತ್ರನ ಕೃಪೆಯಿಂದ.

ಯಾರೋ ಒಬ್ಬ : ನೀವು ಬೆಳೆದಿಲ್ಲ. ಆದರೂ ನಿಮ್ಮಾಣೆ ಮಾಡಿ ಹೇಳ್ತೀನಿ ತಾಯಿಗಂಡ ನಾನು ನಿಜಕ್ಕೂ ನಿಮ್ಮ ಮಗ.

ಮುದುಕ : ಏನು ನನಗೆ ಬಯ್ತಿಯಾ ?

ಯಾರೋ ಒಬ್ಬ : ಹೌದು, ನಾನು ನನ್ನ ತಂದೆಗೆ ಬಯ್ತಿದ್ದೀನಿ. ಬಾಯಿಗೆ ಬಂದದ್ದು ಬಯ್ಯಲಿಲ್ಲ. ಅರ್ಥಪೂರ್ಣ ಬಯ್ಗಳು ಅವು.

ಮುದುಕ : ನೀನು ನನ್ನ ಮಗ ಅಲ್ಲ ಅನ್ನೋದಕ್ಕೆ ಇದೊಂದು ಪುರಾವೆ. ನನ್ನ ಮಗನಿಗೆ ಹೀಗೆ ತಾಯಿಯ ಮೇಲಿಂದ ಬಯ್ಯೋಕೆ ಬರ್ತಿರಲಿಲ್ಲ. ಅವನು ನಾಯಿ, ಬೆಕ್ಕು, ದನಕರುಗಳ ಮೇಲಿಂದಲೇ ಬಯ್ಗಳು ಹಾಕ್ತಿದ್ದ. ಪರವಾಗಿಲ್ಲ. ಇಪ್ಪತ್ತು ವರ್ಷ ಕಾದು ಕುಳಿತಂತೆ ಇನ್ನಷ್ಟು ವರ್ಷ ಕಾಯ್ತೀನಿ. ಇಂದಲ್ಲ ನಾಳೆ ನನಗೆ ನನ್ನ ಮಗ ಸಿಕ್ಕೆ ಸಿಗ್ತಾನೆ.

ಮುಂದಿನ ವರ್ಷ ಜಾತ್ರೆ ಇದ್ದೇ ಇದೆ. ಶ್ರೀ ವಿಚಿತ್ರನ ಕೃಪೆ. (ಹೋಗಲು ಅಣಿಯಾಗುತ್ತಾನೆ)

ಯಾರೋ ಒಬ್ಬ : ಮುಂದಿನ ವರ್ಷ ಇಲ್ಲ. ಇದೇ ನಿಮ್ಮ ಕೊನೆಯ ಜಾತ್ರೆ. ಆ ದೊಂಬರಾಟದವನ, ಭಿಕ್ಷುಕನ, ಸಮಯ ಸಾಧಕನ, ನಷ್ಟ ಭ್ರಷ್ಟರ ಜಾತ್ರೆ ಇಲ್ಲಿ ಮತ್ತೆ ಸೇರುವುದಿಲ್ಲ. ನಾನು ಅದರ ಖಾಯಂ ವ್ಯವಸ್ಥೆ ಮಾಡ್ತೀನಿ. ಜೈ ಶ್ರೀ ವಿಚಿತ್ರಾ ಅಸ್ತೋಸ್ತು.

(ದೇವಾಲಯದ ಹತ್ತಿರ ಓಡುತ್ತಾನೆ. ಜನರೂ ಓಡುವ ಆತುರದಲ್ಲಿದ್ದಾರೆ. ಪಡುವಣದಲ್ಲಿ ಸೂರ್ಯ ಮುಳುಗಲು ಇನ್ನು ಕೆಲವೇ ಕ್ಷಣಗಳು ಉಳಿದಿವೆ. ಅಷ್ಟರಲ್ಲಿ ಭಟ್ಟರು ಓಡೋಡಿ ಬರುತ್ತಾರೆ.

ಭಟ್ಟ : ಭಕ್ತರೆಲ್ಲ ಓಡಿ ಬನ್ನಿ. ದೇವರ ಮೂರ್ತಿ ಯಾರೋ ಕದ್ಕೊಂಡು ಬಿಟ್ಟರು...ಕಳ್ಳ...ಕಳ್ಳ...

(ಭಟ್ಟ ಕೂಗಿ ಜನರನ್ನು ಸೇರಿಸುತ್ತಾರೆ. ಅಷ್ಟರಲ್ಲಿ ವೇದಿಕೆಯ ಮೇಲೆ ಯಾರೋ ಒಬ್ಬ ಬಂದು ನಿಲ್ಲುತ್ತಾನೆ. ಅವನ ಕೈಗಳಲ್ಲಿ ಶ್ರೀ ವಿಚಿತ್ರನ ಮೂರ್ತಿಯಿದೆ.)

ಯಾರೋ ಒಬ್ಬ : ನನ್ನಲ್ಲೀಗ ಹನ್ನೆರಡು ಆನೆಗಳ ಶಕ್ತಿ ಬಂದಿದೆ. ಈ ಉಲ್ಟಾ ಶ್ರೀ ವಿಚಿತ್ರನನ್ನು ಹನ್ನೆರಡು ಹರದಾರಿ ದೂರ ಸಮುದ್ರಕ್ಕೊಯ್ದು ಬೀಸಿ ಒಗಿತೀನಿ. ಅಲ್ಲಿಗೆ ಮುಗೀತು ನಿಮ್ಮ ಜಾತ್ರೆ ಮತ್ತು ಮನುಷ್ಯನ ಮನುಷ್ಯತ್ವದ ಅಧಃಪತನ ಯಾತ್ರೆ.

ಭಟ್ಟರು : ಅವನ ಕೈಯಲ್ಲಿದ್ದ ಮೂರ್ತಿ ಕಿತ್ಕೊಳ್ಳಿ. ದೇವರ ಮೈಮೇಲೆ ಪೂರ್ತಿ ಅಲಂಕಾರ ಇದೆ.

(ಎಲ್ಲರೂ ಓಡಿ ಬಂದು ಯಾರೊ ಒಬ್ಬನನ್ನು ಸುತ್ತುವರಿಯುತ್ತಾರೆ. ಅವನ ಕೈಯಿಂದ ಮೂರ್ತಿ ಕಿತ್ತುಕೊಳ್ಳಲು ಹೆಣಗಾಡುತ್ತಾರೆ. ಅವನದು ಉಡದ ಹಿಡಿತ, ಬಿಟ್ಟು ಕೊಡುವುದಿಲ್ಲ. ಭಟ್ಟರು ಕೂಗುತ್ತ ಕೂಗುತ್ತ ಅತ್ತಿತ್ತ ಓಡಾಡುತ್ತಿದ್ದಾರೆ. ಇನ್ನಷ್ಟು ಜನ ಸೇರುತ್ತಾರೆ. ಗದ್ದಲ ಹೆಚ್ಚುತ್ತದೆ. ಈ ಎಳೆದಾಟದಲ್ಲಿ ಯಾರೋ ಒಬ್ಬನ ಕೈಯಲ್ಲಿದ್ದ ಮೂರ್ತಿ ಜಾರಿ ಕೆಳಗೆ ಬೀಳುತ್ತದೆ. ಅಷ್ಟರಲ್ಲಿ ಒಬ್ಬ ಕೂಗುತ್ತ ಬರುತ್ತಾನೆ)

ಒಬ್ಬ : ಸೂರ್ಯ ಮುಳುಗಿದ.

(ಜನ ಇದ್ದ ಸ್ಥಿತಿಯಲ್ಲಿ ಕಲ್ಲಿನಂತೆ ನಿಲ್ಲುತ್ತಾರೆ. ಕ್ರಮೇಣ ಕತ್ತಲೆ ಆವರಿಸುತ್ತದೆ. ಜನ ಶಿಲಾಕೃತಿಗಳಂತೆ ಕಾಣ ತೊಡಗುತ್ತಾರೆ. ರಂಗದ ಕಡೆ ಬೆಳಕು ಚೆಲ್ಲುತ್ತದೆ. ಅಲ್ಲಿ ಮೊದಲು ಬಂದ ರಚಕ ನಿಂತುಕೊಂಡಿದ್ದಾನೆ.)

ರಚಕ : ನನಗೆ ಗೊತ್ತುಂಟು ಈ ಕಲಾಕೃತಿಗಳ ಬಗ್ಗೆ ನಿಮ್ಮ ತಲೆಯಲ್ಲಿ ಅನೇಕ

ಪ್ರಶ್ನೆಗಳು ಎದ್ದಿರಬಹುದು. ಅದಕ್ಕೆಲ್ಲ ವಿವರಣೆ ಕೊಡುವ ಅಗತ್ಯ ವಿಲ್ಲ. ನಾನು ಮೊದಲೇ ಹೇಳಿದ ಹಾಗೆ ಇದೊಂದು ದಂತಕಥೆ. ಶ್ರೀ ವಿಚಿತ್ರನ ಜಾತ್ರೆಯಲ್ಲಿ ಕಾಣುವುದೆಲ್ಲವೂ ನಿಜವೆಂದು ನಂಬಿದರೂ ಇದೇ ಪ್ರವೃತ್ತಿಗಳನ್ನು ಇತರ ಜಾತ್ರೆಗಳಲ್ಲೂ ಕಾಣುತ್ತೀರಿ. ಪಣಜಿಯ ಗುಡ್ಡದ ಮೇಲಿನ ಮಾರುತಿ ಜಾತ್ರೆಯಾಗಲಿ, ಶಿರಗಾಂವ್‌ದ ಜಾತ್ರೆಯಾಗಲೀ, ಫಾತರ್ಪೆಯ ಜಾತ್ರೆಯಾಗಲೀ, ಬೊಡಗೇಶ್ವರ, ನಾರ್ವೆಯ, ಸಾವಯಿವೆರೆಂ, ಸಾಂಖಳಿಯ ಜಾತ್ರೆ, ಜಾಂಬಾವಲಿಯ ಗುಲಾಲ್, ಇಷ್ಟೇ ಅಲ್ಲ ಪಂಢರಪುರದ ಆಷಾಢ ಏಕಾದಶಿ, ಅಯೋಧ್ಯೆಯ ಶ್ರೀರಾಮ ನವಮಿ, ಮಥುರೆಯ ಶ್ರೀಕೃಷ್ಣ ಜನ್ಮಾಷ್ಟಮಿ, ಜಗನ್ನಾಥಪುರದ ರಥಯಾತ್ರೆ, ಹರಿದ್ವಾರ ಮತ್ತು ಪ್ರಯಾಗದ ಕುಂಭ ಮೇಳಗಳು ಎಲ್ಲಾನೂ ಒಂದೇ. ಜಾತ್ರೆಯ ರಂಗ-ರೂಪ ಬೇರೆ ಬೇರೆ ಆಗಿರಬಹುದು. ವೇಷ-ಭಾಷೆ ಬೇರೆಬೇರೆ ಆಗಿರಬಹುದು. ಆದರೆ ವೃತ್ತಿ - ಪ್ರವೃತ್ತಿ ಒಂದೇ. ನಿಮ್ಮ ಮನಸ್ಸಿನಲ್ಲಿ ಯಾವ ಪ್ರಶ್ನೆಗಳು ಮೂಡಿವೆಯೋ ಗೊತ್ತಿಲ್ಲ. ಆದರೆ ನನ್ನ ಮನಸ್ಸಿನಲ್ಲಿ ಒಂದು ಪ್ರಶ್ನೆ ಮಾತ್ರ ಭೂತದಂತೆ ಕಾಡ್ತಾ ಇದೆ. ಎಲ್ಲಾ ಜಾತ್ರೆಗಳಲ್ಲಿ ಇಂಥ ಒಳ್ಳೆಯವರು, ಕೆಟ್ಟವರು ಇರೋದಾದ್ರೆ ಯಾರೋ ಒಬ್ಬನಂಥವರು ಯಾಕೆ ಕಾಣಿಸಿಕೊಳ್ಳೋದಿಲ್ಲ. ಈಗ ಇಂಥ ಯಾರೋ ಒಬ್ಬನ ಅಗತ್ಯ ಇದ್ದೇ ಇದೆ. ಈ ಸಮಸ್ಯೆ ನನ್ನ ನಿದ್ದೆಗೆಡಿಸಿದೆ. ನೀವೂ ಇಂಥ ಪ್ರಶ್ನೆಯಿಂದ ನಿದ್ದೆಗೆಡುವಂತಾಗಲೀ ಎಂದು ನಾನು ಬಯಸ್ತೀನಿ.

(ಕತ್ತಲೆ)





ಪುಂಡಲೀಕ ನಾರಾಯಣ ನಾಯಕ ಕೊಂಕಣಿ ಭಾಷೆಯ ಪ್ರಸಿದ್ಧ ಲೇಖಕರಲ್ಲಿ ಒಬ್ಬರು. ಇವರು ಕವನ, ಕಾದಂಬರಿ, ಕಥೆ, ನಾಟಕ, ಚಲಚಿತ್ರ ಸಂಭಾಷಣೆ, ರೇಡಿಯೋ ನಾಟಕ, ದೂರದರ್ಶನದ ನಾಟಕಗಳನ್ನು ಬರೆದಿದ್ದಾರೆ. ಇವರ ಬಹುಪಾಲು ಕೃತಿಗಳು ವಿಮರ್ಶಕರ ಮೆಚ್ಚುಗೆಯನ್ನು ಪಡೆದಿವೆ. ಅನೇಕ ಕೃತಿಗಳು ಇಂಗ್ಲಿಷ, ಮರಾಠಿ, ಕನ್ನಡ, ಹಿಂದಿ, ಗುಜರಾತಿ, ತಮಿಳು ಭಾಷೆಗಳಿಗೆ ಅನುವಾದಗೊಂಡಿವೆ.

ಇವರು ಗೋವಾ ಕೊಂಕಣಿ ಅಕಾಡಮಿಯ ಅಧ್ಯಕ್ಷರಾಗಿ, ನ್ಯಾಷನಲ್ ಬುಕ್ ಟ್ರಸ್ಟ ಸಲಹಾ ಸಮಿತಿಯ ಪ್ರಮುಖರಾಗಿ, ಅಖಿಲ ಭಾರತ ಕೊಂಕಣಿ ಸಮ್ಮೇಳನದ ಅಧ್ಯಕ್ಷರಾಗಿ, ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಸದಸ್ಯರಾಗಿ ದುಡಿದಿದ್ದಾರೆ. ಒಬ್ಬ ರಂಗಕರ್ಮಿಯಾಗಿ, ನಾಟಕಕಾರರಾಗಿ, ನಿರ್ದೇಶಕರಾಗಿ ಅನೇಕ ಕೊಂಕಣಿ ನಾಟಕಗಳನ್ನು ರಂಗಭೂಮಿಗೆ ತಂದಿದ್ದಾರೆ. 'ದೇಖಣಿದುರಾಯಿ' ಎಂಬ ಚಲಚಿತ್ರ ನಿರ್ಮಿಸಿ, ಸಂಭಾಷಣೆ ಬರೆದು ಫಿಲ್ಮೋತ್ಸವದಲ್ಲಿ ಬಹುಮಾನ ಪಡೆದಿದ್ದಾರೆ.

ಅವರ ಸಾಹಿತ್ಯಕೃಷಿಗೆ ರಾಜ್ಯಮಟ್ಟದ, ರಾಷ್ಟ್ರಮಟ್ಟದ ಅನೇಕ ಪ್ರಶಸ್ತಿಗಳು ಸಂದಿವೆ. ಇತ್ತೀಚೆಗೆ ಅವರು ಅಮೇರಿಕೆಯ ಒಂದು ವಿಶ್ವವಿದ್ಯಾಲಯದ ಕರೆಯ ಮೇರೆಗೆ ಹೋಗಿ ಮೂರು ತಿಂಗಳು ಸಾಂಸ್ಕೃತಿಕ ಅಧ್ಯಯನ ಮಾಡಿ ಬಂದಿದ್ದಾರೆ.

ಇಲ್ಲಿ ಅವರ ಎರಡು ನಾಟಕಗಳ ಕನ್ನಡಾನುವಾದ ನಿಮ್ಮ ಮುಂದೆ ಇದೆ.